# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ , ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಅರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ – 1 ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು

2 ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು



ರಾಗ ನಾಟಿ ತಾಳ ಖಂಡಛಾಪು

ಶ್ರೀರಂಗ ವಿಠಲನ ಸಿರಿಮುಕುಟಕೆ ಶರಣು ॥ಪ॥
ಶಿರದಲೊಪ್ಪುವ ನೀಲಕುಂತಳಕೆ ಶರಣು
ಸಿರಿಸಹೋದರನರ್ಧ ಲಲಾಟಗಳಿಗೆ ಶರಣು
॥ಅ ಪ॥

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆ ಶರಣು
ಸಂಪಿಗೆಯ ಕುಸುಮ ಸಮ ನಾಸಿಕಕೆ ಶರಣು
[illegible]ಂಪುರತ್ನದ ಕರ್ಣ ಕುಂಡಲಗಳಿಗೆ ಶರಣು
ಇಂಪು ದರ್ಪಣ ನಿಭ ಕಪೋಲಗಳಿಗೆ ಶರಣು ॥೧॥

ಕುಂದ ಕುಟ್ಮಲ ಪೋಲ್ವ ದಂತಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದು ಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು ॥೨॥

ಅಬ್ಜನಾಭನ ದಿವ್ಯ ಕಂಬುಕಂಠಕೆ ಶರಣು
ಅಬ್ಜಮುಖಿಯಿರುವ ವಕ್ಷಸ್ಥಳಕೆ ಶರಣು
ಕುಬ್ಜೆಯ ಡೊಂಕ ತಿದ್ದಿದ ಭುಜಗಳಿಗೆ ಶರಣು
ಅಬ್ಜಜಾಸನನ ಪೆತ್ತ ನಾಭಿಗೆ ಶರಣು ॥೩॥

ರನ್ನಗಂಟೆಗಳಿರುವ ನಿನ್ನ ಕಟಿಗೆ ಶರಣು
ಪೊನ್ನ ಕದಳೀ ಪೋಲ್ವ ತೊಡೆಗಳಿಗೆ ಶರಣು
ಪುನ್ನಾಗಕರಗೆತ್ತ ದ್ವಯ ನಿತಂಬಕೆ ಶರಣು
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು ॥೪॥

ಮಂಗಳ ವೈಭೋಗಂಗಳ ಅಂಘ್ರಿದ್ವಯಕೆ ಶರಣು
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು
ಪೊಂಗೊಳಲನೂದುವ ಅಂಗುಲಿಗಳಿಗೆ ಶರಣು
ರಂಗವಿಠಲನ ಸರ್ವಾಂಗಕೆ ಶರಣು ॥೫॥

ಶ್ರೀಪಾದರಾಜರು






ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ,
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೩] ಜೂನ್ ೧೯೮೨ [ಸಂಚಿಕೆ ೧**


# ವಿಷಯಸೂಚಿ

# ವಾರ್ತಾಲಹರಿ

## ವೈಕುಂಠ ತೋರಣ

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯಕ್ಕೆ ಯಾತ್ರಿಕರು ನಡೆದು ಹೋಗುವ ಹಾದಿಯಲ್ಲಿ ವೈಕುಂಠ ತೋರಣವನ್ನು ನಿರ್ಮಿಸಲು ತೀರ್ಮಾನಿಸಲಾಗಿದ್ದು, ಇದೇ ಏಪ್ರಿಲ್ 24 ರಂದು ತಿ ತಿ ದೇ ಕಾರ್ಯ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀನಾಗಿರೆಡ್ಡಿ ಅವರು ಶಂಕುಸ್ಥಾಪನೆ ಮಾಡಿದರು ಈ ವೈಕುಂಠ ತೋರಣವು 120 ಅಡಿ ಉದ್ದ ಹಾಗೂ 50 ಅಡಿ ಎತ್ತರವಿದ್ದು 4 64 ಲಕ್ಷರೂಗಳ ವೆಚ್ಚವಾಗಬಹುದೆಂದು ಅಂದಾಜಿಸಲಾಗಿದೆ

## ಕ್ಯಾಸೆಟ್ ಬಿಡುಗಡೆ

ತಿರುಮಲೆಯ ಆರ್ಷಸದನ್ ಹಾಲಿನಲ್ಲಿ 23–4–82 ರಂದು ವೇದಾಂತ ದೇಶಿಕ ಕೃತ ದಯಾಶತಕ, ದಶಾವತಾರ ಸ್ತೋತ್ರಗಳ, ಶ್ರೀಮತಿ ಮಣಿ ಕೃಷ್ಣಸ್ವಾಮಿಯವರಿಂದ ಗಾಯನಗೊಂಡ ಧ್ವನಿ ಮುದ್ರಣದ ಕ್ಯಾಸೆಟ್‌ಗಳನ್ನು ಆಂಧ್ರ ಪ್ರದೇಶ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಪಿ ಎಸ್ ರಾಜಗೋಪಾಲರಾಜು ಅವರ ಅಧ್ಯಕ್ಷತೆಯಲ್ಲಿ ಬಿಡುಗಡೆ ಮಾಡಲಾಯಿತು

ಕ್ಯಾಸೆಟ್ ಅನ್ನು ಬಿಡುಗಡೆ ಮಾಡಿ ಮೊದಲ ಕ್ಯಾಸೆಟ್ ಅನ್ನು ಪಿ ವಿ ಆರ್ ಕೆ ಪ್ರಸಾದರಿಗೆ ನೀಡಿದ ಶ್ರೀ ರಾಜಗೋಪಾಲರಾಜು ಅವರು 1976 ರಲ್ಲಿ ವೇದಾಂತ ದೇಶಿಕರ ದಯಾಶತಕದ ಎಲ್ ಪಿ ಯನ್ನು ಹೊರತಂದದ್ದನ್ನು ನೆನಪಿಸಿಕೊಂಡು ಈ ಕ್ಯಾಸೆಟ್‌ಗಳೂ ಹಾಗೆಯೇ ಜನಪ್ರಿಯವಾಗಲಿ ಎಂದು ಹಾರೈಸಿದರು

ಸರ್ವಶ್ರೀ ಬಲರಾಮರೆಡ್ಡಿ, ಟಿ ಕೆ ಗೋಪಾಲಸ್ವಾಮಿ ಅಯ್ಯಂಗಾರ್, ಬಿ ರಜನೀಕಾಂತರಾವ್, ತಮಿಳು 'ಸಾವಿ' ಪತ್ರಿಕೆಯ ಸಂಪಾದಕ ಎಂ ಎಸ್ ವಿಶ್ವನಾಥನ್ ಅವರುಗಳು ತತ್ಸಂದರ್ಭದಲ್ಲಿ ಮಾತನಾಡಿದರು

ಕ್ಯಾಸೆಟ್ ಪಡೆದು ಮಾತನಾಡಿದ ಪ್ರಸಾದ್ ಅವರು ದೇವಸ್ಥಾನಗಳಿಗೆ ಐವತ್ತು % ರಿಯಾಯಿತಿ ದರಗಳಲ್ಲಿ ಟೇಪ್ ರಿಕಾರ್ಡರ್, ಕ್ಯಾಸೆಟ್‌ಗಳನ್ನು ಒದಗಿಸುವ ಯೋಜನೆಯನ್ನು ವಿವರಿಸಿದರು.



ತಿರುಮಲೆಯಲ್ಲಿ ನಿರ್ಮಿಸಲಾಗುವ ವೈಕುಂಠ ತೋರಣದ ಚಿತ್ರ

ಮದರಾಸಿನ ಸರಸ್ವತಿ ಸ್ಟೋರ್ಸ್‌ನವರು ಏರ್ಪಡಿಸಿದ್ದ ಸಭೆಯಲ್ಲಿ ಅದರ ಮಾಲೀಕ ಷಣ್ಮುಗಂ ಅವರ ಸ್ವಾಗತ, ಕೃಷ್ಣಸ್ವಾಮಿ ಅವರಿಂದ ವಂದನೆಗಳಾದವು ಗಾಯಕಿ ಶ್ರೀಮತಿ ಮಣಿಕೃಷ್ಣಸ್ವಾಮಿಯವರನ್ನು ಸನ್ಮಾನಿಸಲಾಯಿತು

## ತಿರುಮಲೆಯಲ್ಲಿ ಮಾಸ್ಟರ್‌ಪ್ಲಾನ್

ತಿರುಮಲೆಯಲ್ಲಿನ ಯಾತ್ರಿಕ ಸಂದಣಿಯ ಅನುಕೂಲಗಳಿಗಾಗಿ ಕ್ಯಾಂಟೀನ್ ನಿರ್ಮಾಣ, ಬಾಲಾಜಿನಗರ ನಿರ್ಮಾಣ, ಪಕ್ಕಾ ಅಂಗಡಿಗಳ ನಿರ್ಮಾಣ, ರಸ್ತೆಗಳನ್ನು ವಿಶಾಲ ಗೊಳಿಸುವಿಕೆ–ಮೊದಲಾದ ಕೆಲಸಗಳ ಮಾಸ್ಟರ್ ಪ್ಲಾನ್ ಶಂಕುಸ್ಥಾಪನೆ 24–4–82 ರಂದು ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ನಾಗಿರೆಡ್ಡಿ ಅವರಿಂದ ನಡೆಯಿತು

ಸುಮಾರು ನಾಲ್ಕುಸಾವಿರ ಜನ ಕುಳಿತುಕೊಳ್ಳಲು ಅನುಕೂಲವಾಗುವಂತೆ 1,25 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದ ಆಸ್ಥಾನ ಮಂಟಪ ಸನ್ನಿಧಿ ವೀಧಿಯಲ್ಲಿ ನಿರ್ಮಾಣವಾಗಲಿದೆ

ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಕ್ಕಾಗಿ 40×60 ಗಳ ಎರಡಂತಸ್ತಿನ ಕಟ್ಟಡವು 6 5 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣವಾಗಲಿದೆ ( 39ನೇ ಪುಟವನ್ನು ನೋಡಿ )



ಮಾಸ್ಟರ್ ಪ್ಲಾನ್‌ನ ಶಂಕುಸ್ಥಾಪನಾಫಲಕವನ್ನು ಅನಾವರಣಗೊಳಿಸುತ್ತ ಶ್ರೀ ಬಿ ನಾಗಿರೆಡ್ಡಿ

# ಧಾರ್ಮಿಕ ಗ್ರಂಥ ಪ್ರಕಾಶನ ಸಹಾಯಧನ ಯೋಜನೆ

ತಿ ತಿ ದೇವಸ್ಥಾನಗಳು ಕೈಗೊಂಡಿರುವ ಧಾರ್ಮಿಕ ಗ್ರಂಥ ಪ್ರಕಾಶನ ಸಹಾಯಧನ ಯೋಜನೆಯನ್ವಯ ಈವರೆಗೆ 53 ಕನ್ನಡ ಪುಸ್ತಕಗಳು ಪ್ರಕಟವಾಗಿವೆ ಅವುಗಳ ಪಟ್ಟಿಯನ್ನು ಕೆಳಗೆ ನೀಡಲಾಗಿದೆ

1 ಬ್ರಹ್ಮಸೂತ್ರಭಾಷ್ಯ ಭಾಗ–1, 2,
ಎ ಎಸ್ ಭೀಮಸೇನಾಚಾರ್, ಬಳ್ಳಾರಿ

2 ಶ್ರೀಮದ್ಭಾಗವತ 7 ಸ್ಕಂಧ
ಎನ್ ಕೃಷ್ಣಮೂರ್ತಿ, ಬೆಂಗಳೂರು

3 ಬಾಲಮಹಾಭಾರತ ಭಾಗ 1, 2, 3,
ನಾರಾಯಣರಾವ್, ರಾಯಚೂರು

4 ಶ್ರೀಮದ್ಭಾಗವತ ಮಹಾಪುರಾಣ 1, 2, 3,
ಆರ್ ಆರ್ ಜಾಗೀರ್ದಾರ್, ಬಿಜಾಪುರ

5 ಎರಡು ಉಪನ್ಯಾಸಗಳು
ಸಂಸ್ಕೃತ ಪರಿಷತ್, ಕತಗಾಲ

6 ಶ್ರೀ ವೆಂಕಟೇಶ್ವರ ಕಥಾಮೃತಂ
ರಾಮಚಂದ್ರು, ಬೆಂಗಳೂರು

7 ಮುಕ್ತಿಮಲ್ಲಿಕಾ ಭಾಗ–1, 3, 4, 7, 10

8 ಗೀತಾವಲೋಕನ ಭಾಗ–1
ಜಿ ಬಿ ಜೋಷಿ, ಗದಗ್

9 ಮಹಾಯೋಗಿ ವೇಮನ
ಎಸ್ ಕೆ ಶ್ರೀನಿವಾಸುಲು, ಕೋಲಾರ

10 ಆಂಜನೇಯ ಸುಪ್ರಭಾತ
ಎಸ್ ರಂಗನಾಥ್, ಬೆಂಗಳೂರು

11 ಶ್ರೀಮದ್‌ಭಾಗವತ ಕಥಾಮೃತ 1, 2, 3,
ಬನ್ನಂಜೆ ಶ್ರೀ ರಾಘವೇಂದ್ರತೀರ್ಥರು, ಬೆಂಗಳೂರು

12 ಶ್ರೀ ವಾದಿರಾಜರು
ಕೊರಟಿ ಶ್ರೀನಿವಾಸರಾವ್, ಬೆಂಗಳೂರು

13 ಮೊದಲಾಳ್ವಾರ್‌ಗಳು ಮುತ್ತು ಅವರ ಪ್ರಬಂಧಗಳು
ಅ ನ ಶ್ರೀನಿವಾಸ ಅಯ್ಯಂಗಾರ್, ಬೆಂಗಳೂರು

14 ಸಂಗ್ರಹ ರಾಮಾಯಣ
ಎ ಎಸ್ ಭೀಮಸೇನಾಚಾರ್, ಬಳ್ಳಾರಿ

15 ಶ್ರೀರಾಮಪಟ್ಟಾಭಿಷೇಕ
ಜಿ ರಾಮಚಂದ್ರ ಶಾಸ್ತ್ರಿ, ಬೆಂಗಳೂರು

16 ಶ್ರೀ ಚಕ್ರ ಪೂಜಾಪದ್ಧತಿ

17 ರಾಮದಾಸ ಮೇಳವಮಾಲಿಕಾ
ಎಂ ಪ್ರಹ್ಲಾದಾಚಾರ್ಯ, ಬೆಂಗಳೂರು

18 ಶ್ರೀರಂಗರಾಜಸ್ತವ
ಎಸ್ ಎಸ್ ಅನಂತರಂಗಾಚಾರ್ಯ, ಬೆಂಗಳೂರು

19 ನಿವೇದನ
ಜಯಸಿಂಹ, ಬೆಂಗಳೂರು

20 ಮಹಾಭಾರತ ಭಾಗ–1, 7, 12, 22, 23
ಭಾರತದರ್ಶನ ಪ್ರಕಾಶನ, ಬೆಂಗಳೂರು

21 ದೇವತೆಗಳು ಹಬ್ಬಗಳು

22 ಕನ್ನಡ ಪಂಚತಂತ್ರ
ಎಂ ಆರ್ ಗೋವಿಂದರಾವ್, ಮೈಸೂರು

23 ಶ್ರೀನಿವಾಸ ವಿಜಯ
ಟಿ ಎಸ್ ರಾಘವೇಂದ್ರರಾವ್, ಬೆಂಗಳೂರು

24 ಜಗನ್ನಾಥದಾಸರ ಕೃತಿಗಳು
ಕೆ ಎಂ, ಕೃಷ್ಣರಾವ್, ಹೈದರಾಬಾದ್

25 ತಿರುವಂದಾದಿಗಳು
ಎನ್ ಎಸ್ ಅನಂತರಂಗಾಚಾರ್, ಬೆಂಗಳೂರು

26 ಶ್ರೀರಾಮ ಸ್ತೋತ್ರಮಂಜರಿ
ಬಿ ಜಿ ರಾಜಾರಾವ್

27 ಕೌಸಲ್ಯಾವಿವಾಹ
ಎನ್ ಕೆ ಹೆಗ್ಗಡೆ, ಸಿದ್ದಾಪುರ

28 ಐರಾವಣ ಕಾಳಗ ,, ,,

29 ಪದ್ಯಮಾಲಾ
ವಿ ಪ್ರಭಂಜನ, ಬೆಂಗಳೂರು.

30 ಕನ್ನಡ ಗೀತಾಮೃತ

31 ಶ್ರೀ ಹರಿಭಜನಾಮೃತಸಾರ

32 ಮೂರ್ತಿಪೂಜೆ
ಜಿ, ಎಲ್ ಐರನಿ, ಬೆಂಗಳೂರು

33 ಸ್ಕಂದಪುರಾಣ ಭಾಗ–1
ಪಂಢರೀನಾಥಾಚಾರ್ಯಗಲಿಗಲಿ

34 ಆಳ್ವಾರ್ ದಿವ್ಯಜೀವನ
ಡಿ ಕೃಷ್ಣ ಐಯ್ಯಂಗಾರ್, ಮೈಸೂರು

35 ಚೈತನ್ಯ ಲೀಲಾಮೃತ
ಗೌಡೀಯಮಠ, ಮದರಾಸು

36 ದಿವ್ಯಪ್ರಬಂಧ ಮಾಲಾ
ಎನ್ ಎಸ್ ಅನಂತರಂಗಾಚಾರ್, ಬೆಂಗಳೂರು

# ಶಾಸನಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ

ಅಖಿಲ ಭಾರತದಲ್ಲಿ ಪರಮಪವಿತ್ರವಾದ ದಿವ್ಯ ದೇಶ ತಿರುಮಲೆ ಸುಮಾರು ೨೦೦೦ ವರ್ಷಗಳಿಗಿಂತ ಹೆಚ್ಚಿನ ಕಾಲದಿಂದ ಪ್ರಸಿದ್ಧವಾಗಿ ಆಸೇತು ಹಿಮಾಚಲ ಪ್ರದೇಶಗಳಿಂದ ಅಸಂಖ್ಯಾತ ಭಕ್ತರನ್ನು ಆಕರ್ಷಿಸುತ್ತಿದೆ ಪರಮಪವಿತ್ರವಾದ ಅನೇಕ ತಿರುಪತಿಗಳಲ್ಲಿ ವೆಂಕಟಾದ್ರಿಯು ಉತ್ತಮೋತ್ತಮವಾದುದೆಂದು ಪರಿಗಣಿಸಲ್ಪಟ್ಟಿದೆ

ತಿರುಪತಿಯ ಉಲ್ಲೇಖವು ಪ್ರಾಚೀನವಾದ ತಮಿಳಿನ ಸಂಘಂಸಾಹಿತ್ಯದಲ್ಲಿ ಸಿಕ್ಕುತ್ತದೆ ಈ ವಡವೇಂಗಡವು (ಉತ್ತರದ ವೇಂಗಡವು) ಆ ಕಾಲದಲ್ಲಿ ತಮಿಳುನಾಡಿಗೂ ವಡಗರ ಪ್ರದೇಶಕ್ಕೂ ಸೀಮಾಪ್ರದೇಶವಾಗಿತ್ತು 'ಅಹನಾನೂರಿನ' ಒಂದು ಪದ್ಯದಲ್ಲಿ ತಿರುವೇಂಗಡದ ತಂಪಾದ ವನಗಳ, ಉತ್ತರ ಭಾಗದಲ್ಲೆಲ್ಲಾ ತೆಲುಗು ಭಾಷೆಯನ್ನಾಡುತ್ತಾರೆ ಎಂದು ಹೇಳಿದೆ ಶಿಲಪ್ಪದಿಕಾರದಲ್ಲಿ (ಕ್ರಿ ಶ ೧ನೆಯ ಶತಮಾನ) ಈ ಕ್ಷೇತ್ರವು ವೈಷ್ಣವ ಕ್ಷೇತ್ರವೆಂಬುದು ಅಲ್ಲಿಯ 'ನೆಡಿಯೋನ್‌ಕುನ್ರಂ' ಎಂಬ ಶಬ್ದದಿಂದ ಸೂಚಿತವಾಗಿದೆ ವೈಷ್ಣವ ಆಳ್ವಾರುಗಳೆಲ್ಲ ಇಲ್ಲಿಯ ದೇವರನ್ನು ವೈಷ್ಣವ ದೇವರೆಂದು ಕೊಂಡಾಡಿದ್ದಾರೆ ಅವರಿಂದೀಚೆಗೆ ಬಂದ ರಾಮಾನುಜಾಚಾರ್ಯ, ವೇದಾಂತ ದೇಶಿಕ, ವ್ಯಾಸತೀರ್ಥ ಮೊದಲಾದ ಭಕ್ತಶಿಕಾಮಣಿಗಳು ಅವನನ್ನು ಮುಕ್ತಕಂಠದಿಂದ ಸ್ತೋತ್ರ ಮಾಡಿದ್ದಾರೆ ಈಗಂತೂ ಆತ ಎಲ್ಲ ಭಾರತೀಯರಿಗೂ ಪರಮ ವರಪ್ರದಾದಿಯೆಂದು ಅಂಗೀಕೃತನಾಗಿದ್ದಾನೆ ಈ ದೇವಸ್ಥಾನದ ಸಾಮಾನ್ಯ ಚರಿತ್ರೆಯನ್ನು ತಿಳಿದುಕೊಳ್ಳಬೇಕಾದವರಿಗೆ ಈ ದೇವಸ್ಥಾನದಲ್ಲಿಯೇ ಇರುವ ಸಹಸ್ರಾರು ಶಾಸನಗಳು ಬಹಳ ಉಪಯೋಗವಾಗಿವೆ ಇವುಗಳಲ್ಲಿ ದೇವಸ್ಥಾನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಬಹು ವಿಸ್ತಾರವಾಗಿ ವರ್ಣಿತವಾಗಿವೆ ಈ ಶಾಸನಗಳ ಸಂಗ್ರಹವನ್ನು ದೇವಸ್ಥಾನದ ಆದೇಶದಂತೆಯೇ ಶ್ರೀ ಸಾಧುಸುಬ್ರಹ್ಮಣ್ಯಶಾಸ್ತ್ರಿಗಳೆಂಬುವರು ಬಹುಶ್ರಮದಿಂದ ಕೂಡಿಸಿ ಅವುಗಳನ್ನು ಸಂಶೋಧಿಸಿ ವಿಭಜನೆ ಮಾಡಿ ಕ್ರಿ ಶ ೧೯೩೦ ನೆಯ ವರ್ಷದ ಸುಮಾರಿನಲ್ಲಿ ಪ್ರಕಟನೆ ಮಾಡಿದ್ದಾರೆ ಅದಕ್ಕೆ ಪ್ರೊ॥ ನೀಲಕಂಠಶಾಸ್ತ್ರಿಗಳ ಮುನ್ನುಡಿಯಿದೆ ಸಂಪಾದಕರ ದೀರ್ಘವಾದ ಉಪೋದ್ಘಾತವೂ ಇದೆ. ಇದರ ಸಾಮಾನ್ಯ ಪರಿಚಯವು ಈ ದೇವಸ್ಥಾನದಲ್ಲಿ ಆಸಕ್ತಿಯುಳ್ಳವರೆಲ್ಲರಿಗೂ ಅತ್ಯಂತ ಪ್ರಯೋಜನಕಾರಿಯಾಗುವುದೆಂದು ಅದರ ಆಧಾರದ ಮೇಲೆಯೇ ಒಂದು ಸಂಕ್ಷಿಪ್ತಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ

ಈ ಶಾಸನಗಳು ೧೯೩೩ನೇ ಮೇ ತಿಂಗಳಿಂದ ೧೯೩೭ರ ಮೇ ತಿಂಗಳವರೆಗೆ ಶೇಖರವಾದವು ಅವುಗಳ ಸಂಖ್ಯೆ ೧೦೬೦ ಇವುಗಳಲ್ಲಿ ೬೪೦ ತಿರುಮಲೆಯ ವೆಂಕಟೇಶ್ವರ ದೇವಾಲಯದಲ್ಲಿಯೂ ೩೪೦ ತಿರುಪತಿಯ ಗೋವಿಂದರಾಜಸ್ವಾಮಿಯ ದೇವಾಲಯದಲ್ಲಿಯೂ, ಉಳಿದವು ಇತರ ದೇವಸ್ಥಾನಗಳಲ್ಲಿಯೂ ಸಿಕ್ಕಿವೆ ಇವುಗಳೆಲ್ಲಾ ರಾಜಮನೆತನದ ಪ್ರಕಾರ ಜೋಡಿಸಲ್ಪಟ್ಟಿವೆ ಇವು ಕ್ರಿ ಶ ೮೦೦ ರಿಂದ ಕ್ರಿ ಶ ೧೯೦೦ರ ವರೆಗಿನ ಕಾಲದವು ಇವುಗಳು ಪಲ್ಲವ, ಚೋಳ, ಪಾಂಡ್ಯ ಮತ್ತು ವಿಜಯನಗರದ ಕಾಲದವುಗಳಾಗಿರುತ್ತವೆ ಈ ಕಾಲದ ಹಿಂದೆಯೂ ಕೆಲವು ಶಾಸನಗಳಿದ್ದಿರಬೇಕು ಅಂತಹ ಕೆಲವು ಶಾಸನಗಳ ಕೆಲವು ಭಿನ್ನಭಾಗಗಳು ಸಿಕ್ಕಿವೆ ಆಗಾಗ ದೇವಾಲಯದ ಜೀರ್ಣೋದ್ಧಾರ ಕಾರ್ಯ ಸಂಬಂಧದಲ್ಲಿ ಶಾಸನಗಳು ನಷ್ಟವಾಗಿರಬೇಕು

---

ಡಾ॥ ಎನ್ ಅನಂತರಂಗಾಚಾರ್

---

ಮೊದಲನೇ ಶಾಸನವು ಕ್ರಿ ಶ ೮೩೦ ರ ಕೋದಂತಿ ವರ್ಮ ಪಲ್ಲವನು ನಂದಾದೀಪಕ್ಕಾಗಿ ದತ್ತಿಬಿಟ್ಟಿರುವುದು ಕೊನೆಯದು ೧೯೦೯ ರಲ್ಲಿ ವಿಚಾರಕರ್ತ ಮಹಂತ್ ಪ್ರಯಾಗದಾಸಜಿ ಹತ್ತಿರಾಂಮ ಜಿ ಅವರದು ಇವು ಸುಮಾರು ೧೧ ಶತಮಾನಗಳ ಕಾಲದ್ದಾದರೂ ಎಲ್ಲ ರಾಜಮನೆತನದ ಪ್ರಾತಿನಿಧ್ಯವು ಸೂಚಿತವಾಗಿಲ್ಲ ಹೆಚ್ಚಿನವು ವಿಜಯನಗರ ಕಾಲದವು ಆದರಿಂದ ಉತ್ತರ ಕಾಲದವು ಇಲ್ಲವೆಂದೇ ಹೇಳಬಹುದು

ಕೆಲವು ಶಾಸನಗಳು ವಿನಾ ಉಳಿದವುಗಳೆಲ್ಲ ತಮಿಳು ಭಾಷೆ ಮತ್ತು ಲಿಪಿಗಳಲ್ಲಿ ಲಿಖಿತವಾಗಿವೆ ಅವುಗಳ ಮಧ್ಯೆ ಕೆಲವಲ್ಲಿ ಗ್ರಂಥಾಕ್ಷರ ಲಿಪಿಯೂ ಉಪಯುಕ್ತವಾಗಿರುವುದುಂಟು ಸುಮಾರು ೫೦ ತೆಲುಗು ಮತ್ತು ಕನ್ನಡ ಲಿಪಿ ಮತ್ತು ಭಾಷೆಗಳಲ್ಲಿವೆ ಕೃಷ್ಣದೇವರಾಯನ ಕಾಲಕ್ಕಿಂತ ಹಿಂದಿನದು ಒಂದು ತೆಲುಗುಭಾಷೆಯದು, ೨ ಕನ್ನಡ ಭಾಷೆಯದು ಸಿಕ್ಕಿವೆ ವೀರಪ್ರತಾಪದೇವರಾಯ, ಸಾಳ್ವನರಸಿಂಹ, ಕೃಷ್ಣದೇವರಾಯ ಮತ್ತು ಅವರ ರಾಣಿಯರ ಶಾಸನಗಳು ಮೂರು ಭಾಷೆಯಲ್ಲಿಯೂ ಇವೆ

ಈಗ ಉಪಲಬ್ಧವಾಗಿರುವ ಶಾಸನಗಳೆಲ್ಲ ಒಂಬತ್ತನೆಯ ಶತಮಾನಕ್ಕಿಂತ ಈಚಿನವುಗಳಾದದ್ದರಿಂದ, ತಿರುಪತಿಯ ಅದಕ್ಕಿಂತ ಹಿಂದಿನ ಚರಿತ್ರೆಯನ್ನು ಅವುಗಳಿಂದ ತಿಳಿಯುವ ಹಾಗಿಲ್ಲ ಆದರೆ ಹಿಂದೆ ತಿಳಿಸಿರುವಂತೆ ಆ ದೇವಾಲಯವೂ ದೇವರೂ ಅದಕ್ಕಿಂತ ಹಿಂದಿನಕಾಲದಿಂದಲೂ ಪ್ರಸಿದ್ಧರಾಗಿದ್ದರು. ಅವುಗಳ ಸಾಮಾನ್ಯ ಪರಿಚಯಮಾಡಿಕೊಂಡೇ ಮುಂದಿನ ಶಾಸನಗಳಲ್ಲಿ ಉಕ್ತವಾದ ವಿಷಯವನ್ನು ಪರಿಶೀಲಿಸುವುದು ಮೇಲು

ಆಳ್ವಾರ್ ಎಂದು ಪ್ರಸಿದ್ಧರಾಗಿರುವ ತಮಿಳು ದೇಶದ ವಿಷ್ಣುಭಕ್ತರು ತಿರುವೇಂಗಡದ ವಿಷಯವಾಗಿ ವಿಸ್ತಾರವಾಗಿ ಹಾಡಿದ್ದಾರೆ ಇವರುಗಳ ಕಾಲ ಕ್ರಿ ಶ ೪ನೆಯ ಶತಮಾನದಿಂದ ೯ನೆಯ ಶತಮಾನದವರೆಗೆ ಇವರು ೧೨ ಜನ ಇವರು ಭಗವಂತನನ್ನು ಕುರಿತು, ಹಾಡಿರುವ ಪದ್ಯ ಸಂಖ್ಯೆ ೪೦೦೦ ಇದಕ್ಕೆ 'ನಾಲಾಯಿರಪ್ರಬಂಧ' ವೆಂದು ಹೆಸರು ಆಳ್ವಾರುಗಳಲ್ಲಿ ಮಧುರಕವಿಯಾಳ್ವಾರ್ ವಿನಾ ಉಳಿದವರೆಲ್ಲ ವೈಷ್ಣವ ದಿವ್ಯದೇಶಗಳನ್ನು ಕುರಿತು ಹಾಡಿದ್ದಾರೆ ಅವರ ಹಾಡುಗಳಲ್ಲಿ ಕಾಣುವ ಕವಿತಾಮಾಧುರ್ಯವೂ ಕಲ್ಪನಾವಿಲಾಸವೂ ಭಕ್ತಿ ಪರಾಕಾಷ್ಠೆಯೂ ಅನ್ಯಾದೃಶವಾದವು ಆಳ್ವಾರುಗಳಲ್ಲಿ ೧೦ ಮಂದಿ ತಿರುವೇಂಗಡವನ್ನು ಕುರಿತು ಸ್ತೋತ್ರಮಾಡಿದ್ದಾರೆ ಅವರ ದೃಷ್ಟಿಯಲ್ಲಿ ಎಲ್ಲ ಕ್ಷೇತ್ರಗಳಿಗಿಂತ ತಿರುವೇಂಗಡವು ಶ್ರೇಷ್ಠವಾದುದೆಂದು ಭಾವನೆ ಮುಂದೆ ಬಂದವರು ಶ್ರೀರಂಗವನ್ನು ವಿಶೇಷವಾಗಿ ಕೊಂಡಾಡಿದ್ದರೂ ಆದಿಕಾಲದಲ್ಲಿ ತಿರುವೇಂಗಡಕ್ಕೆ ಅಗ್ರಸ್ಥಾನ.

ಒಟ್ಟು ೪೦೦೦ ಪಾಶುರಗಳಲ್ಲಿ ಸುಮಾರು ೨೦೦ ಪಾಶುರಗಳು ತಿರುವೇಂಗಡಕ್ಕೆ ಮೀಸಲಾಗಿವೆ ಆಳ್ವಾರುಗಳ ಕೃತಿಗಳಲ್ಲಿ ತಿರುವೇಂಗಡಕ್ಕೆ ಸಂಬಂಧಪಟ್ಟವನ್ನು ಸಂಖ್ಯಾದೃಷ್ಟಿಯಿಂದ ವಿಭಾಗ ಮಾಡಿದರೆ ಪೊಯ್‌ಹಯ್ ೧೦, ಪೂದತ್ತಾರ್ ೯, ಪೇಯ್ ೧೦, ತಿರುಮೊಳಿಶೆಯ್ ೧೪, ನಮ್ಮಾಳ್ವಾರ್ ೪೪, ಕುಲಶೇಖರ ೧೧, ಪೆರಿಯಾಳ್ವಾರ್ ೧, ಆಂಡಾಳ್ ೧೬, ತಿರುಪ್ಪಾಣಿ ೨ ಮತ್ತು ತಿರುಮಂಗೈ ೬೩ ಆಗುತ್ತದೆ ಇದರಿಂದ ಪ್ರತಿಯೊಬ್ಬ ಆಳ್ವಾರರಿಗೂ ತಿರುವೇಂಗಡದಲ್ಲಿ ಆಸಕ್ತಿಯಿತ್ತೆಂಬುದೂ ಇತರ ಕ್ಷೇತ್ರಗಳಿಗಿಂತ ಇದಕ್ಕೆ ಹೆಚ್ಚು ಪೂಜ್ಯತೆ ಇತ್ತೆಂಬುದೂ ತಿಳಿದುಬರುತ್ತದೆ ಅಲ್ಲದೆ ಈ ಆಳ್ವಾರರುಗಳೆಲ್ಲ ಬಹುದೂರದಲ್ಲಿದ್ದ ಪಾಂಡ್ಯ ಚೋಳ ರಾಜ್ಯಗಳಲ್ಲಿದ್ದವರು ಆಗ ಸಂಚಾರ ಸೌಲಭ್ಯಗಳಾವುವೂ ಇರಲಿಲ್ಲ ತಿರುವೇಂಗಡವು ಕಾಡಿನ ಮಧ್ಯದಲ್ಲಿ ಭಯಂಕರವಾದ ಮೃಗಗಳು ಕೂಡಿರುವ ಸ್ಥಳದಲ್ಲಿತ್ತು ಆದರೂ ಎಲ್ಲವನ್ನು ಸಹಿಸಿ ಈ ದೇವರಸೇವೆ ಮಾಡಬೇಕೆಂಬ ಆಸೆಯು ಆ ಬೆಟ್ಟದ ವಿಷಯದಲ್ಲಿ ಅವರಿಗಿದ್ದ ಪೂಜ್ಯತೆಯನ್ನು ಪ್ರದರ್ಶಿಸುತ್ತದೆ ಆಳ್ವಾರುಗಳೆಲ್ಲ ಈ ಬೆಟ್ಟವನ್ನು ತಿರುಮಲೈ, ತಿರುವೇಂಗಡಂ, ಎಂದು ಕರೆದಿದ್ದಾರೆ ಅಲ್ಲಿಯ ದೇವರನ್ನು 'ತಿರುವೇಂಗಡತ್ತಾನ್,' 'ತಿರುವೇಂಗಡ ಮುಡೈಯಾನ್' ಎಂದು ಸಂಬೋಧಿಸಿದ್ದಾರೆ ಅವನ ಶಂಖ, ಚಕ್ರ, ತುಳಸಿ ಮಾಲೆಯನ್ನೂ ಅವನ ವಕ್ಷಸ್ಥಳದಲ್ಲಿರುವ ದೇವಿಯನ್ನೂ ವರ್ಣಿಸಿದ್ದಾರೆ ಅವನನ್ನು ರಾಮ, ಕೃಷ್ಣ, ದಾಮೋದರ, ಪದ್ಮನಾಭ ಎಂಬುದಾಗಿ ಸಂಬೋಧಿಸಿದ್ದಾರೆ ಇವನೇ ತಿರುವೇಂಗಡದ ಮೇಲೆ ಬಂದು ನಿಂತಿರುವವನು ಎಂದಿದ್ದಾರೆ ಶರಣಾಗತಿಯ ಮಹತ್ವವನ್ನು ಕೊಂಡಾಡಿದ್ದಾರೆ ಇವರ ಸ್ತೋತ್ರಗಳಲ್ಲಿ ದೇಗುಲವಾಗಲಿ, ಉತ್ಸವ ಮೂರ್ತಿಗಳಾಗಲಿ ನಿರ್ದೇಶಿತವಾಗಿಲ್ಲ ಇಬ್ಬರಂತೂ ದೇಗುಲವಿಲ್ಲದೆ ಎಲ್ಲರಿಗೂ ದರ್ಶನವನ್ನೀಯುವ ಸ್ವಾಮಿ ಎಂದಿದ್ದಾರೆ ತಿರುಮೊಳಿಶೈ ಆಳ್ವಾರ್‌ರವರು ದೇಗುಲವಿಲ್ಲವೆಂದೇ ಸ್ಪಷ್ಟಪಡಿಸಿದ್ದಾರೆ ಕುಲಶೇಖರರು ನಿನ್ನ ದೇಗುಲದ ಹೊಸ್ತಿಲಾಗಿ ಹುಟ್ಟಬೇಕು ಎಂದು ಅಪೇಕ್ಷಿಸಿದ್ದಾರೆ ಈ ಮಾತುಗಳನ್ನೆಲ್ಲಾ ನೋಡಿದಾಗ ಆದಿಕಾಲದಿಂದ ತಿರುವೇಂಗಡದ ಮೂರ್ತಿಯು ವಿಷ್ಣುಮೂರ್ತಿಯೇ ಆಗಿತ್ತೆಂದೂ, ರಾಮಾನುಜರ ಕಾಲದಲ್ಲಿ ಶೈವ, ವೈಷ್ಣವ ಸಮಸ್ಯೆ ಹುಟ್ಟಿತೆಂದೂ ಹೇಳುವ ಮಾತು ಅರ್ಥವಿಲ್ಲದುದೆಂದೂ ಹೇಳಬೇಕಾಗುತ್ತದೆ

ಕೊನೆಯ ಆಳ್ವಾರರ ಕಾಲ ಎಂಟನೆಯ ಶತಮಾನ ಈಗ ದೊರೆತಿರುವ ಶಾಸನಗಳು ೯ನೆಯ ಶತಮಾನದಿಂದ ಪ್ರಾರಂಭವಾಗುತ್ತವೆ ಆಳ್ವಾರರ ಉಕ್ತಿಗಳು, ಶಾಸನೋಕ್ತಿಗಳು ಒಟ್ಟುಗೂಡಿದರೆ ತಿರುಮಲೆಯ ಸುಮಾರು ೧೨ ಶತಮಾನದ ಚರಿತ್ರೆಯು ದೊರಕಿದಂತಾಗುತ್ತದೆ

ಈ ಶತಮಾನಗಳ ಶಾಸನಗಳಲ್ಲಿ ದೇವಸ್ಥಾನಕ್ಕೆ ಸಂಬಂಧಪಟ್ಟ ಹಾಗೆ ನಂದಾದೀಪ, ನಿವೇದನ, ನಂದನವನ, ಉತ್ಸವಗಳು, ಕಟ್ಟಡಗಳು, ನಿತ್ಯ ಮತ್ತು ಹೆಚ್ಚುಗಟ್ಟಲೆ ಉತ್ಸವಗಳು, ರಾಮಾನುಜಕೂಟ, ದೇವಸ್ಥಾನದ ಮೂರ್ತಿಗಳು— ಇವುಗಳಿಗೆ ಸಂಬಂಧಪಟ್ಟ ಹಾಗೆ ದಾನಮಾಡಿರುವ ಗ್ರಾಮಭೂಮಿಗಳು, ದ್ರವ್ಯ— ದಾನಮಾಡಿದವರ ವಿಷಯ, ದೇವಸ್ಥಾನದ ಸಿಬ್ಬಂದಿ, ಅಲ್ಲಿ ಸೇವೆ ನಡೆಸಿದ ಜೀಯರ್‌ಗಳು ಮತ್ತು ಅವರ ಅಸ್ಸಯ ಯಿಗಳು, ಪೂಜಾವಿವರ ಮೊದಲಾದವುಗ ಚಾರಿತ್ರಿಕ ಬದಲಾವಣೆಗಳು ಉಕ್ತವಾಗಿವೆ

ವಿಜಯನಗರದ ಪೂರ್ವಕಾಲದ ಶಾಸನಗಳ ಬೇರೆ ಬೇರೆ ದೇವಾಲಯದಲ್ಲಿ ಹಗಲು ರಾ ನಂದಾದೀಪವನ್ನಿಡಲು ಕೊಟ್ಟ ಕೊಡುಗೆಗ ಸಂಬಂಧವಾಗಿವೆ ಇದಕ್ಕಾಗಿ ಪ್ರಾರಂಭದ ದೇವಸ್ಥಾನದ ಶ್ರೀ ಭಂಡಾರಕ್ಕೆ ನಗದುದ್ರ ಗಳನ್ನೇ ಕೊಡುತ್ತಿದ್ದರು ಕೆಲವು ಸಂದರ್ಭಗಳ ಗೋವುಗಳನ್ನು ದೇವಾಲಯಕ್ಕೆ ಕೊಟ್ಟಿರುವುದ ಉಂಟು ಆಗ ಅವುಗಳ ರಕ್ಷಣಾಕಾರ್ಯವು ದೇ ಸ್ಥಾನದವರಿಗೆ ಸೇರಿದುದಾಗಿತ್ತು ಕೆಲವು ಕಾಲ ಮೇಲೆ ಇದು ಸುಗಮವಾಗಿ ಕಂಡುಬರದಿದ್ದಾ ಬೇಕೆಯವರಿಗೆ ಹಸುಗಳನ್ನು ದಾನಮಾಡಿ ಅದ ಮೂಲಕ ದೇವಾಲಯದ ಉಪಯೋಗಕ್ಕಾ ಹಾಲು, ಮೊಸರು, ತುಪ್ಪ ಮೊದಲಾದವುಗಳನ ಒದಗಿಸುವ ಏರ್ಪಾಡನ್ನು ಮಾಡಿಸಿದ್ದಾರೆ ಕೆ ವರು ಒಂದೊಂದು ಸಲ ೨೦೦ ಹಸುಗಳನ ಮತ್ತು ಅವುಗಳಿಗೆ ಸಾಕಾದಷ್ಟು ಗೂಳಿಗಳನ್ನ ಕೊಟ್ಟಿರುವುದುಂಟು ಗರ್ಭಗೃಹದಲ್ಲಿ ಯಾವ ಗಲೂ ತುಪ್ಪದ ದೀಪವೇ ಉಪಯೋಗವಾಗು ದ್ದುದು ಸ್ಪಷ್ಟವಾಗಿದೆ

ಮುಂದೆ ರಾಜರು, ಪ್ರಧಾನಿಗಳು, ಶ್ರೀಮ ತರು, ದೀಪದಾನಗಳ ಜೊತೆಗೆ ಆಭರಣಗಳನ್ನ ಗ್ರಾಮಭೂಮಿಗಳನ್ನೂ ಪ್ರತ್ಯಕ್ಷ ದ್ರವ್ಯಗಳನ್ನ ದಾನಮಾಡಿದ್ದಾರೆ ಹೀಗೆ ದಾನಮಾಡಿದ ಹ ಮತ್ತು ಚಿನ್ನವನ್ನು ಕೆಲವು ಸಂದರ್ಭಗಳಲ್ಲಿ ಬ ಗಾಗಿ ಕೊಟ್ಟಿರುವುದೂ, ವಿಶೇಷವಾಗಿ ದೇವಸ ನದ ದೇವದಾನ ಗ್ರಾಮಗಳಲ್ಲಿ ಕೆರೆ, ಬಾ ಕಾಲುವೆ ಇವುಗಳ ನಿರ್ಮಾಣಕ್ಕೆ ಉಪಯೋ ಸಲ್ಪಡುತ್ತಿದ್ದುದೂ ನಿರೂಪಿತವಾಗಿದೆ ದೇವಸ ನದ ಬಂಜರು ಜಮೀನುಗಳನ್ನು ವ್ಯವಸಾ ಮಾಡುವುದಕ್ಕೂ ಉಪಯೋಗಿಸುತ್ತಿದ್ದುದುಂಟ ಖಾಸಗಿ ಜನಗಳು ಈ ಭೂಮಿಯನ್ನು ವ್ಯವಸಾಯ ಮಾಡಲು ಕೆರೆ, ಕಾಲುವೆಗಳನ್ನು ಏರ್ಪಡಿಸು ದ್ದುದು ಕಂಡುಬರುತ್ತದೆ ಅಂತಹವರುಗಳ ದೇವಸ್ಥಾನದ ಪ್ರಸಾದವನ್ನು ಗೌರವಸೂಚ ವಾಗಿ ಹಂಚುತ್ತಿದ್ದುದು ವಿದಿತವಾಗಿದೆ ಆ ಕಾಲದ ಪಲ್ಲವ ಮತ್ತು ಚೋಳಶಾಸನಗ ನಂದಾದೀಪಗಳ ವಿಷಯವೇ ಆಗಿವೆ

ತಿರುಮಲೆ ದೇವಸ್ಥಾನದ ಬೆಳವಣಿಗೆಯ ಚ ತ್ರೆಯಲ್ಲಿ ಬಹುಮುಖ್ಯವಾಗಿ ವಿಚಾರಿಸ ಬೇಕ ಗಿರುವುದು ಪಲ್ಲವ ರಾಜಕುಮಾರಿಯಾದ ಸಾ ವೆಯು ಕ್ರಿ ಶ 966 ರಲ್ಲಿ ಹಾಕಿಸಿದ ಶಾಸ ಇದರ ಪ್ರಕಾರ ಸಾಮವೆಯು ಒಂದು ಬೆಳ್ಳಿ

ಮಣವಾಳ ಪೆರುಮಾಳನ್ನು ಮಾಡಿಸಿ, ಮೂಲ ದೇವರ ಕೃವರ್ಣಾಚನೆಯಾದ ಮೇಲೆ ಈ ಮೂರ್ತಿಯನ್ನು ತಿರುವಿಳಂಕೋಯಿಲ್‌ನಲ್ಲಿ ಪ್ರತಿಷ್ಠೆ ಮಾಡಿಸಿದಳು ಈ ಶಾಸನವು ದೇವಸ್ಥಾನದ ಮೊದಲನೇ ಪ್ರಾಕಾರದ ಉತ್ತರದ ಗೋಡೆಯ ಮೇಲಿದೆ ಈ ತಿರುವಿಳಂಕೋಯಿಲನ್ನು ಈಗ ಸ್ನಪನ ಮಂಟಪ ವೆಂದು ಹೇಳುತ್ತಾರೆ ಇದನ್ನು ಹೊಸವಿಗ್ರಹವನ್ನು ಇಡುವುದಕ್ಕಾಗಿಯೇ ಕಟ್ಟಿಸಿರ ಬೇಕು ಈ ಬೆಳ್ಳಿಯ ವಿಗ್ರಹದೊಡನೆ ಅನೇಕ ಅಮೂಲ್ಯವಾದ ಆಭರಣಗಳನ್ನು ದಾನಮಾಡಿದ್ದಾಳೆ ಅವುಗಳ ವಿವರ ಹೀಗಿದೆ ವಜ್ರ, ಮುತ್ತು, ಮಾಣಿಕ್ಯ, ಹವಳಗಳಿಂದ ಕೂಡಿದ ಚಿನ್ನದ ಆಭರಣಗಳನ್ನೂ ನಾಯಕ ಮಣಿಯಿಂದ ಕೂಡಿರುವ ಬೆಳ್ಳಿಯ ಪ್ರಭಾವಳಿಯನ್ನು ಸಮರ್ಪಿಸಿ ಅಭಿಷೇಕ ಮಾಡಿಸಿ ಪ್ರತಿಷ್ಠೆ ಮಾಡಿಸಿದಳು ಈ ಸಂದರ್ಭದಲ್ಲಿ ಮೂಲದೇವರಿಗೆ ಯಾವ ಆಭರಣವನ್ನೂ ಸಮರ್ಪಿಸಿಲ್ಲ ಹೊಸ ದೇವರಿಗಾಗಿ ಮಾಡಿಸಿದ ಆಭರಣಗಳು ವಿವರಗಳು ಶಾಸನದಲ್ಲಿ ಹೀಗಿವೆ 23 ವಜ್ರಗಳನ್ನೂ, 16 ದೊಡ್ಡ ಮುತ್ತುಗಳನ್ನೂ, 2 ನಾಯಕ ಮಾಣಿಕ್ಯಗಳನ್ನೂ, ಅಳವಡಿಸಿರುವ ಕಿರೀಟ ಒಂದು, ಬಂಗಾರದ ಮಕರ ಕುಂಡಲಗಳು, 14 ವಜ್ರಗಳನ್ನೂ 2 ಮಾಣಿಕ್ಯಗಳನ್ನೂ, 11 ದೊಡ್ಡ ಮುತ್ತುಗಳನ್ನೂ, ಹಲವು ಸಣ್ಣ ಮುತ್ತುಗಳನ್ನೂ ಹೊಂದಿದ ಡಾಬು ಒಂದು, 2 ತೋಳು ಬಳೆಗಳು, ಎರಡು ಮಾಣಿಕ್ಯಗಳುಳ್ಳ ನಾಲ್ಕು ನಾಡಾ ಬಳೆಗಳು, ಕೊರಳಿಗೆ 4 ಚಿನ್ನದ ಸರಗಳು, ಕಾಲಿಗೆ ಗಟ್ಟಿ ಚಿನ್ನದ ಬಳೆಗಳು, ಒಟ್ಟು 52 ಆಭರಣಗಳನ್ನು ಬಂಗಾರದಲ್ಲಿಯೇ ಮಾಡಿಸಿ ಸಮರ್ಪಿಸಿದ್ದಾರೆ ಇವುಗಳಗೆಲ್ಲ ಉಪಯೋಗಿಸಿರುವ ಬಂಗಾರದ ತೂಕ 42 ಕಳಂಜಗಳು

ಇವಳು ಮಾಡಿಸಿದ ಮತ್ತೊಂದು ಸೇವೆ ಪುರಟ್ಟಾಶಿ ತಿರುನಾಳ್ ಅಥವಾ ಬ್ರಹ್ಮೋತ್ಸವ ಈ ಉತ್ಸವವು ಈ ಮೂರ್ತಿಗೇ ಎನ್ನುವ ಸೂಚನೆ ಇದೆ ಆದರೆ ಬೀದಿ ಉತ್ಸವವು ಈ ಮೂರ್ತಿಗೆ ಇರಲಾರದು ಬೀದಿ ಉತ್ಸವಕ್ಕೆ ಬೇರೆ ಮೂರ್ತಿ ಇದ್ದಿರ ಬೇಕು ಆ ವೇಳೆಗೆ ಮಲೆಯಪ್ಪನ್ ಎಂದು ಕರೆಯಲ್ಪಡುವ ಈಗಿನ ಉತ್ಸವ ಮೂರ್ತಿಯು ಬೆಟ್ಟದ ಮೇಲೆ ಬಂದಿರಲಾರದು ಈಗ ಉಗ್ರ ಶ್ರೀನಿವಾಸ ಎಂದು ಕರೆಯಲ್ಪಡುವ ವಿಗ್ರಹ ಉಪಯೋಗವಾಗುತ್ತಿದ್ದಿರಬೇಕು ಈಗ ಈ ಮೂರ್ತಿಯು ಗರ್ಭಗುಡಿಯಲ್ಲಿಯೇ ಇದೆ ಆದರೆ ಇದು ಯಾವಾಗ ಹೀಗೆ ಬಂದಿತೆಂಬುದು ಯಾರಿಗೂ ತಿಳಿಯದು

ಈಗ ಉತ್ಸವ ಮೂರ್ತಿಯಾಗಿರುವ ಮಲೆಯಪ್ಪನ್ ಪರಿಚಯವಾಗುವುದು 1314 ಒಂದು ಶಾಸನದಿಂದ ಅದಕ್ಕೆ ಹಿಂಚೆ ಇವರು ತಿರುಚಾನೂರಿನ ತಿರುವೇಂಗಡಸನ್ನಿಧಿಯಲ್ಲಿ ಬೆಟ್ಟದ ದೇವರ ಪ್ರತಿನಿಧಿಯಾಗಿದ್ದ ಹಾಗೆ ತಿಳಿದು ಬರುತ್ತದೆ ಆ ದೇವಾಲಯವು ಪಾಂಚರಾತ್ರಾಗಮದ ರೀತಿ ಪೂಜಿಸಲ್ಪಡುತ್ತಿದ್ದು ಆ ದೇವರನ್ನು ಬೆಟ್ಟದ ಮೇಲಿನ ವೈಖಾನಸ ಸಂಪ್ರದಾಯದ ಮೂಲಾಲಯಕ್ಕೆ ತರಲು ಬಹುಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ ತಿರುಚಾನೂರಿನಲ್ಲಿ ಶೈವರ ಪ್ರಾಬಲ್ಯವು ಹೆಚ್ಚಾಗಿ ತಿರುವೇಂಗಡ ಕೋಯಿಲನ್ನು ಮುಚ್ಚುವ ಸನ್ನಿವೇಶ ಬಂದಿತು ಆಗ ಅಲ್ಲಿಯ ಮೂರ್ತಿಯು ಬೇರೆಲ್ಲಿಯೋ ಗುಪ್ತವಾಗಿ ರಕ್ಷಿಸಲ್ಪಟ್ಟಿರಬೇಕು ಈ ಮೂರ್ತಿಯು ಮೇಲ್ಬೆಟ್ಟಕ್ಕೆ ಬಂದುದರ ವಿಷಯವಾಗಿ ಒಂದು ಕಥೆ ಇದೆ ತಿರುಮಲೆಯ ಬ್ರಹ್ಮೋತ್ಸವಗಳಲ್ಲಿ ಈಗ ಉಗ್ರ ಶ್ರೀನಿವಾಸರೆನಿಸಿಕೊಂಡಿರುವ ವಿಗ್ರಹವನ್ನು ಬಿಜಯ ಮಾಡಿಸುತ್ತಿದ್ದರಂತೆ ಒಂದು ಬ್ರಹ್ಮೋತ್ಸವದ ದಿನ ಇದ್ದಕ್ಕಿದ್ದ ಹಾಗೆ ದೇವರು ತೇರಿನಲ್ಲಿರುವಾಗ ಆಕಸ್ಮಾತ್ ಬೆಂಕಿಯು ಕಾಣಿಸಿಕೊಂಡು ತೇರು ಸುಟ್ಟು ಹೋಯಿತಂತೆ ಆಗ ದೇವರು ಒಬ್ಬರ ಮೇಲೆ ಆವೇಶ ಬಂದು 'ಇನ್ನು ಮೇಲೆ ಈ ದೇವರನ್ನು ತೇರಿನ ಮೇಲೆ ಕೂರಿಸಬೇಡಿ, ಕೂರಿಸಿದರೆ ತೇರು ಸುಟ್ಟು ಹೋಗುತ್ತದೆ' ಎಂದು ಹೇಳಿ ಇವರಿಗೆ ಬದಲಾಗಿ ಬೇರೆ ವಿಗ್ರಹವಿರುವ ಸ್ಥಳವನ್ನು ಸೂಚಿಸಿದರಂತೆ ಆ ಆದೇಶದ ಮೇಲೆ ಆ ಒಂದು ಬೆಟ್ಟದ ಇಳಿಜಾರಿನಲ್ಲಿ ಹೋಗಿ ಹುಡುಕಲಾಗಿ, ಮಲೆಯಪ್ಪ ಉಭಯನಾಚ್ಚಿಯಾರ್‌ರೊಡನೆ ಸಿಕ್ಕಿತಂತೆ ಅದನ್ನು ದೇವಾಲಯದ ಗುಡಿಯಲ್ಲಿ ತಂದು ಸೇರಿಸಲಾಯಿತಂತೆ ಈ ದೇವರನ್ನು ದೇವಸ್ಥಾನದಲ್ಲಿ ಛೇದಿರಾಯನ ಹೊರ ಮಂಟಪದಲ್ಲಿ (ತಿರುಪ್ಪು ಮಂಟಪ) ಕೂಡಿಸಿ ವಿಶೇಷವಾಗಿ ಉತ್ಸವವನ್ನು ನಡೆಸಬೇಕೆಂದು 1314ರ ಶಾಸನವು ತಿಳಿಸುತ್ತದೆ ಈ ಮೂರ್ತಿಗಳೇ ತಿರುಚಾನೂರಿನ ಅರ್ಚಕರು ಬಚ್ಚಿಟ್ಟಿದ್ದ ಮೂರ್ತಿಗಳಾಗಿರಬೇಕು ಈ ಶಾಸನದಿಂದ ಮುಂದಕ್ಕೆಲ್ಲಾ ಈ ವಿಗ್ರಹಗಳೇ ಉತ್ಸವಾದಿಗಳಿಗೆ ಉಪಯೋಗವಾಗಿದ್ದಿರಬಹುದು ಮಹಮ್ಮದೀಯರ ಉಪಟಗಳಿಂದ ಶ್ರೀರಂಗದ ರಂಗನಾಥ ಸ್ವಾಮಿಯವರ ಉತ್ಸವದ ವಿಗ್ರಹವನ್ನು ಸುಮಾರು 40 ವರ್ಷಗಳ ಕಾಲ – 1365 ರ ವರೆಗೆ ತಿರುಮಲೆ ದೇವಸ್ಥಾನದಲ್ಲಿಟ್ಟಿದ್ದರು ಪಾಂಚರಾತ್ರಾಗಮಕ್ಕೆ ಸೇರಿದ ಆ ವಿಗ್ರಹದ ಸಹಚರ್ಯದಿಂದ ಈ ವಿಗ್ರಹಗಳು ಬೆಟ್ಟದ ದೇವರ ನಿತ್ಯಪೂಜೆಯಲ್ಲಿ ಸೇರಿ ಕೊಂಡಿರಬೇಕು

ಸಾಮುವೆಯ ಕಾಲದಿಂದ 1314 ರ ಶಾಸದವರೆಗಿನ ಮಧ್ಯಕಾಲದಲ್ಲಿ ಭಕ್ತಾದಿಗಳ ದೃಷ್ಟಿಯು ದೀಪರಾಧನೆಯಿಂದ ನೈವೇದ್ಯ ಮತ್ತು ಪುಷ್ಪಕೈಂಕರ್ಯಗಳ ಕಡೆಗೆ ತಿರುಗಿದಂತೆ ಕಾಣುತ್ತದೆ ಸಾಮಾನ್ಯವಾಗಿ ದೇವಸ್ಥಾನದಲ್ಲಿ ಪ್ರಾತಃ ಮಧ್ಯಾಹ್ನ, ಸಾಯಂಕಾಲ ಈ ಮೂರು ಕಾಲಗಳಲ್ಲಿ ವೆಂಕಟೇಶನಿಗೆ ನೈವೇದ್ಯ ಸಮರ್ಪಣೆ ನಡೆಯುತ್ತಿತ್ತು ಕಾಲಾನುಕಾಲದಲ್ಲಿ ನೈವೇದ್ಯವನ್ನು ಸಮರ್ಪಿಸುತ್ತಿದ್ದ ಸಂಧಿಕಾಲಗಳ ಹೆಸರೇ ನಿವೇದನಕ್ಕೆ ರೂಢಿಯಾಯಿತು ಸೇವಾರ್ಥಗಾರರ



ಉತ್ಸಾಹ ವಿಶೇಷವಾಗಿ ದಿನಕ್ಕೆ 30 ಸಂಧಿಗಳು ಏರ್ಪಾಡಾದವು ಒಂದೊಂದೂ ಒಬ್ಬೊಬ್ಬರ ಹೆಸರಿನಲ್ಲಿ ನಡೆಯಲು ಪ್ರಾರಂಭವಾಯಿತು ಅವುಗಳ ಪ್ರಮಾಣವೂ, ಪ್ರಕಾರವೂ ಹೆಚ್ಚುತ್ತಾ ಬಂದಿತು

ಹಾಗೆಯೇ ವೆಂಕಟೇಶನಿಗ ಪರಮ ಪೂಜ್ಯವಾದ ಪುಷ್ಪಕೈಂಕರ್ಯಕ್ಕೆ ಪ್ರಾಶಸ್ತ್ಯ ದೊರೆಕಿತು ಅದಕ್ಕಾಗಿ ಅನೇಕ ನಂದನ ವನಗಳು ವೃದ್ಧಿಯಾದವು ಅದಕ್ಕೆ ಸೇರಿದ ಹಾಗೆ ಮಂಟಪಗಳು, ಮಠಗಳು, ವಿಶೇಷವಾಗಿ ಹೆಚ್ಚುಗೊಂಡವು

ಪ್ರಾಚೀನ ಕಾಲದಿಂದಲೂ ಸೇವೆಗೆ ಕೇಂದ್ರವಾಗಿದ್ದುದು ಬೆಟ್ಟದ ಮೇಲಿನ ತಿರುವೇಂಗಡಸ್ವಾಮಿಯೇ ಎಲ್ಲ ಸೇವೆಗಳು ಅವರಿಗೇ ನಡೆಯುತ್ತಿತ್ತು ಮೇಲಕ್ಕೆ ಬಂದು ದರ್ಶನಮಾಡುವುದು ಕಷ್ಟವಾದುದರಿಂದಲೂ ಶ್ರೀರಾಮಾನುಜರ ಮತ ಪ್ರಚಾರ ದೃಷ್ಟಿಯಿಂದಲೂ, ಸುಮಾರು ಕ್ರಿ ಶ 1000 ನೇ ವರ್ಷದಿಂದ ತಿರುಪತಿಯಲ್ಲಿ ಗೋವಿಂದ ರಾಜ ದೇವಸ್ಥಾನವು ನಿರ್ಮಾಣವಾಗಿ ಅದಕ್ಕೆ ಸೇರಿದ ಹಾಗೆ ಆಳ್ವಾರ್ ಆಚಾರ್ಯರ ಗುಡಿಗಳು ರಾಮ ಮತ್ತು ಕೃಷ್ಣರ ಗುಡಿಗಳು ಸ್ಥಾಪಿತವಾದುವು ಈ ದೇವಾಲಯಗಳಲ್ಲಿ ಪಾಂಚರಾತ್ರ ರೀತ್ಯಾ ಅಧ್ಯಯನೋತ್ಸವಾದಿಗಳು ಪ್ರಾರಂಭವಾದವು ಮುಂದಿನ ರಾಜಾಧಿರಾಜರುಗಳ ದೃಷ್ಟಿ ಈ ಎಲ್ಲಾ ದೇವಾಲಯಗಳಿಗೂ ಹಂಚಲಾಯಿತು

ಮಲೆಯಪ್ಪನು ಬೆಟ್ಟದ ಮೇಲೆ ಬಂದು ಸೇರುವ ವೇಳೆಗೆ ವಿಜಯನಗರ ರಾಜ್ಯ ಸ್ಥಾಪಿತವಾಗಿ ಆ ರಾಜರ ದೃಷ್ಟಿಯು ತಿರುಮಲೆ ತಿರುಪತಿ ದೇವಸ್ಥಾನಗಳ ಮೇಲೆ ಸಮನಾಗಿ ಪ್ರಸಾರವಾದವು ಆದಿಕಾಲದ ರಾಜರು ಮೇಲಿನ ದೇವಸ್ಥಾನಕ್ಕೆ ನಿವೇದನ, ತಿರುಮಂಜನ ಮೊದಲಾದವುಗಳನ್ನು ಸಮರ್ಪಿಸಿದ್ದರೂ, ಅವರ ಸಂಪೂರ್ಣವಾದ ಸೇವೆಯು ಈ ದೇವಸ್ಥಾನಗಳಿಗೆ ಸಂದಿರುವುದು ಸಾಳುವ ನರಸಿಂಹನ ಕಾಲದಿಂದ ಮುಂದಕ್ಕೆ ಆತನು ವೆಂಕಟೇಶನ ಅವಿಚ್ಛಿನ್ನ ಭಕ್ತ ಶ್ರೀವೈಷ್ಣವರ ಶಿಷ್ಯ ಆ ವೇಳೆಗೆ ತಿರುಮಲೆಯಲ್ಲಿ ಶ್ರೀವೈಷ್ಣವರ ಪ್ರಭಾವ ಹೆಚ್ಚಿತ್ತು ಈತನು ಅವರ ಪ್ರಭಾವಕ್ಕೆ ಒಳಗಾಗಿದ್ದುದರಿಂದ ಈ ಕಾಲವನ್ನು ದೇವಾಲಯದ ದೃಷ್ಟಿಯಿಂದ ಪರಮೋತ್ಕೃಷ್ಟವೆಂದು ಕರೆಯಬಹುದು ಅವನ ಆಳ್ವಿಕೆಯ ಕಾಲ ಕ್ರಿ ಶ 1445 ರಿಂದ 1504 ರ ವರೆಗೆ ಅವನ ಹಿರಿಯರು ಆ ದೇವಾಲಯಕ್ಕೆ ಮಾಡಿದ ಸೇವೆಯ ಹಿನ್ನೆಲೆಯ ಪ್ರಭಾವ ಅವನ ಮೇಲೆ ವಿಶೇಷವಾಗಿತ್ತು ಅಲ್ಲದೆ ಅವನ ರಾಣಿಯರು ಮಕ್ಕಳು ಅಧಿಕಾರಿಗಳು ಆಚಾರ್ಯಪುರುಷರು, ಊಳಿಗದವರು ಮೊದಲಾದವರೆಲ್ಲರೂ ಯಥೋಚಿತವಾಗಿ ತಮ್ಮ ಸೇವೆಯನ್ನು ಸಲ್ಲಿಸಿದರು ಸಾಳುವ ನರಸಿಂಹನ ಕಾಲದಲ್ಲಿ ದೇವಾಲಯವು ಬೆಳೆಯಿತು ಆಲಯದ ಐಶ್ವರ್ಯವು ಹೆಚ್ಚಿತು ಉತ್ಸವಗಳು ಅಧಿಕವಾದುವು ಗೋಪುರಗಳು ಮಂಟಪಗಳು ನಿರ್ಮಾಣವಾದುವು ಕೋನೇರಿಗಳು ಜೀರ್ಣೋದ್ಧಾರವಾದವು ಮಲೆಯ ಮೇಲಿರುವ ಕೊಳಕ್ಕೆ ಸ್ವಾಮಿ ಪುಷ್ಕರಣಿ ಎಂಬ ಹೆಸರಾಯಿತು ಇದೇ ಮುಂದೆ ತೆಪ್ಪ ಕೊಳವಾಯಿತು ಬೆಟ್ಟದ ಮೇಲೆ ಅನ್ನ ಉಂಜಲ್ (ಡೋಲೋತ್ಸವ) ಅಸ್ತಿತ್ವಕ್ಕೆ ಬಂದಿತು ವರ್ಷದ 123 ದಿನಗಳಲ್ಲಿ ಉತ್ಸವಗಳು ಏರ್ಪಟ್ಟವು ನರಸಿಂಹನ ಕಾಲದಲ್ಲಿ ದೇವಸ್ಥಾನಕ್ಕೆ ದಾನವಾದ ಗ್ರಾಮಗಳ ಸಂಖ್ಯೆ 26 ವರ್ಷ ಪೂರ್ತ ಸಂಪಾದಿತವಾದ ಹಣ 1, 15, 615 ದೇವಸ್ಥಾನದಲ್ಲಿ ಪ್ರತಿನಿತ್ಯವೂ 1500 ಜನಗಳಿಗೂ, ಹೆಚ್ಚುಗಟ್ಟಲೆಯ ದಿನಗಳಲ್ಲಿ ದಿನಕ್ಕೆ 4000 ಜನಗಳಿಗೂ, ಉಚಿತವಾಗಿ ಪ್ರಸಾದ ಹಂಚುವಿಕೆ ಏರ್ಪಾಡಾಯಿತು ರಾಜನಿಗೆ ಈ ಕಾಲದಲ್ಲಿ ವಿಶೇಷವಾಗಿ ಸಹಾಯ ಮಾಡಿದವರು ಕಂದಾಡೆ ರಾಮಾನುಜಯ್ಯಂಗಾರ್ ಮತ್ತು ಹಸ್ತಗಿರಿಯಯ್ಯ ಎಂಬುವವರು ಇವರು ರಾಮಾನುಜ ಕೂಟಗಳನ್ನೂ ಧರ್ಮಶಾಲೆಗಳನ್ನೂ ಸ್ಥಾಪಿಸಿ ಬಂದ ಭಕ್ತರಿಗೆಲ್ಲಾ ಉಚಿತ ಭೋಜನ ವ್ಯವಸ್ಥೆಯನ್ನು ಮಾಡಿದರು ರಾಮಾನುಜ ಕೂಟದಲ್ಲಿ ಶಾತ್ತಾದಿಗಳಿಗೂ ಧರ್ಮಶಾಲೆಯಲ್ಲಿ ಎಲ್ಲ ಪಂಗಡದವರಿಗೂ ಪ್ರಸಾದ ವಿನಿಯೋಗ ವಾಗುತ್ತಿತ್ತು ಇವರು ಅನೇಕ ಏಕಾಂಗಿ ಜೀಯರ್‌ಗಳನ್ನು ಒಟ್ಟುಗೂಡಿಸಿ ಅನೇಕ ನಂದನವನಗಳನ್ನು, ಮಠಗಳನ್ನೂ ನಡೆಸಿಕೊಂಡು ಬಂದು ದೇವಾಲಯದ ಸೇವೆಗಾಗಿ ಪುಷ್ಪಕೈಂಕರ್ಯಕ್ಕೆ ನೆರವಾದರು ಈ ಕಾಲದಲ್ಲಿ ಭಕ್ತಾದಿಗಳಿಗೆ ಅವಶ್ಯಕವಾದುದಕ್ಕಿಂತ ಹೆಚ್ಚಾಗಿ ಪ್ರಸಾದ ನಿವೇದನವಾಗುತ್ತಿದ್ದುದರಿಂದ ರಾಮಾನುಜಯ್ಯಂಗಾರ್ಯ ಅದನ್ನು ಭಕ್ತಾದಿಗಳಿಗೆ ಮಾರುವುದಕ್ಕೆ ಪ್ರಾರಂಭ ಮಾಡಿದನು ಅದರಿಂದ ಬಂದ ಹಣವು ದೇವಸ್ಥಾನದ ಆಭರಣಗಳನ್ನು ದುರಸ್ತಿ ಮಾಡಲು ಸಾಕಾಗುವಷ್ಟು ಆಗುತ್ತಿತ್ತು

( 33 ನೇ ಪುಟ ನೋಡಿ )

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | |
|---|---|---|---|
| 1 | ದರ್ಶನ | ವಿಶೇಷ ಪ್ರವೇಶ ಪ್ರತಿಯೊಬ್ಬರಿಗೆ | ರೂ 2–00 |
| 2 | ಅರ್ಜಿತ | ಕಾಲಸೋಲ 1) ಪೊಂಗಲ್ | ರೂ 55–00 |
| | | 2) ಪುಳಿಯೋಗರೆ | ರೂ 50–00 |
| | | 3) ದಧ್ಯೋದನ | ರೂ 40–00 |
| | | 4) ಕೇಸರಿಬಾತ್ | ರೂ 85–00 |
| | | 5) ಸಕ್ಕರೆ ಪೊಂಗಲ್ | ರೂ 65–00 |
| | | 6) ದೋಸೆ | ರೂ 35–00 |
| | | 7) ಶಾಕರಬಾತ್ | ರೂ 90–00 |
| | | 8) ಸೀರಾ | ರೂ 155–00 |
| 3 | ಸೇವೆಗಳು | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ 150–00 |
| | | 2) ಸಹಸ್ರನಾಮಾರ್ಚನೆ | ರೂ 6–50 |
| | | 3) ಅರ್ಚನೆ | ರೂ 1–00 |
| | | 4) ಆರತಿ | ರೂ 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ 150–00 |
| | | 7) ತಿರುಚ್ಚಿ ಉತ್ಸವ | ರೂ 63–00 |
| | | 8) ಗಜವಾಹನ | ರೂ 32–00 |

—ಪೇಷ್ಕಾರ್

# ಶ್ರೀಪಾದರಾಜರು

## ಉಕ್ತಿಯ ಶಕ್ತಿ

ಪಶ್ಚಿಮ ದಿಕ್ಕಿನಲ್ಲಿ ಸೂರ್ಯ ಕೆಂಪು ತಟ್ಟೆಯಾಗಿ ಸರಸರನೆ ಸರಿಯುತ್ತಿದ್ದನು, ರಸ್ತೆಯ ಪಕ್ಕಗಳಲ್ಲಿ ಹಸಿರು ವಿಸ್ತಾರವಾಗಿ ಹರಡಿತ್ತು. ಒಂದು ಕಡೆ ಸಣ್ಣ ಬೆಟ್ಟ, ಅದರ ತಪ್ಪಲಿನಲ್ಲಿ ತೆಂಗು ಬಾಳೆಯ ತೋಟಗಳು, ಇವುಗಳ ನಡುವೆ ಕಣ್ವನದಿ ತುಂಬಿ ಹರಿಯುತ್ತಿತ್ತು, ಅಲ್ಲಿದ್ದ ಮಲ್ಲಿಗೆ, ಸಂಪಗೆ, ಜಾಜಿ, ಗುಲಾಬಿ, ಹೂಗಳಲ್ಲಿನ ಪರಿಮಳವನ್ನು ಕುಡಿದು, ನದಿಯ ನೀರಿನ ತಂಪಿನಿಂದ ಭಾರವಾಗಿದ್ದ ಗಾಳಿ ನಿಧಾನವಾಗಿ ಬೀಸುತ್ತಿತ್ತು. ಐದಾರು ವರ್ಷ ವಯಸ್ಸಿನ ಹುಡುಗರು ಕೈಗಳಲ್ಲಿ ದೊಣ್ಣೆಗಳನ್ನು ಹಿಡಿದುಕೊಂಡು ದನಗಳನ್ನು ಮುಂದೆ ಅಟ್ಟುತ್ತಾ, ಹುರುಪಿನಿಂದ ಮನೆಗೆ ತೆರಳುತ್ತಿದ್ದರು, ಅವರ ಮೈ ಕೈಗಳೆಲ್ಲಾ ಧೂಳನ್ನು ಕುಡಿದಿತ್ತು. ಆಗ ಇದ್ದಕ್ಕಿದ್ದಂತೆ ಸೂರ್ಯನ ಕೆಂಗಿರಣಗಳಿಂದ ಮತ್ತಷ್ಟು ಕೆಂಪಾದಂತೆ ತೋರುತ್ತಿದ್ದ, ಕಾವಿ ವಸ್ತ್ರವನ್ನುಟ್ಟ ತೇಜಃ ಪುಂಜ ವ್ಯಕ್ತಿಯೊಂದು ಮೇನೆಯಲ್ಲಿ ಕುಳಿತು,

“ಇಲ್ಲಿಂದ ಅಬ್ಬೂರು ಎಷ್ಟು ದೂರವಿದೆ?” ಎಂದು ಗಂಭೀರ ಧ್ವನಿಯಲ್ಲಿ ಪ್ರಶ್ನಿಸಿತು!

ಬಾಲಕರ ಗುಂಪು ಪ್ರಶ್ನೆಗೆ ಉತ್ತರಿಸುವ ಬದಲು, ಪ್ರಶ್ನಿಸಿದ ವ್ಯಕ್ತಿಯ ಮುಖ ಮುದ್ರೆಯನ್ನು ಭಯ ಭಕ್ತಿಗಳಿಂದ ನೋಡುತ್ತಿತ್ತು!

ಆಗ, “ಸ್ವಾಮಿ, ನಮ್ಮನ್ನೂ ಈ ದನಕರುಗಳನ್ನೂ ಸೂರ್ಯನನ್ನೂ ಗಮನಿಸಿರಿ, ಆಗ ಅಬ್ಬೂರು ಎಷ್ಟು ದೂರವಿದೆಯೆಂಬುದು ತಿಳಿಯುತ್ತದೆ” ಎಂದು ಒಬ್ಬ ಬಾಲಕ ಪ್ರಶ್ನೆಗೆ ಧೈರ್ಯವಾಗಿ ಒಗಟಿನ ರೂಪದಲ್ಲಿ ಉತ್ತರಿಸಿದನು

ಸಂಜೆಯ ಹೊತ್ತಿಗೆ ದನಗಳೊಡನೆ ಮನೆಗೆ ಬಾಲಕರು ಹಿಂದಿರುಗುವುದು ಹಳ್ಳಿಯ ಪದ್ಧತಿಯಲ್ಲವೆ! ಅಬ್ಬೂರು ತುಂಬ ಸಮೀಪವಿದೆಯೆಂಬುದನ್ನು ಬಾಲಕ ಲಕ್ಷ್ಮೀನಾರಾಯಣ ಧ್ವನ್ಯಾತ್ಮಕವಾಗಿ ನುಡಿದಿದ್ದನು

ಬಾಲಕನ ಉಕ್ತಿಯ ಶಕ್ತಿಗೆ ಬೆರಗಾದ ಗುರು ಅವನನ್ನು ಹತ್ತಿರ ಕರೆದು, “ಬಾ, ನನ್ನೊಡನೆ ಕುಳಿತು ಅಬ್ಬೂರಿಗೆ ದಾರಿ ತೋರಿಸು” ಎಂದರು

“ಕ್ಷಮಿಸಿ, ನಿಮ್ಮಂತಹ ತಪಸ್ವಿಗಳೊಡನೆ ದನಕಾಯುವ ಬಾಲಕನಾದ ನಾನು ಹೇಗೆ ಕುಳಿತುಕೊಳ್ಳುವುದು?” ಎಂದು ಉತ್ತರಿಸಿದಾಗ ಯತಿಗಳಿಗೆ ಮತ್ತಷ್ಟು ಸಂತೋಷವಾಯಿತು

‘ಅಯ್ಯಾ ನಿನ್ನ ಹೆಸರೇನು?

‘ಲಕ್ಷ್ಮೀನಾರಾಯಣ’ ಎಂದು ಉತ್ತರಿಸಿದ ಬಾಲಕ ದನಕರುಗಳನ್ನೋಡಿಸಿಕೊಂಡು ಗೆಳೆಯರೊಡನೆ ಮನೆಗೆ ಓಡಿದನು

ಲಕ್ಷ್ಮೀನಾರಾಯಣ ಅಬ್ಬೂರಿನ ಶೇಷಗಿರಿ ಆಚಾರ್ಯ, ಮತ್ತು ಗಿರಿಯಮ್ಮ ಎಂಬ ಸಾತ್ವಿಕ ಮಾಧ್ವ ಬ್ರಾಹ್ಮಣ ದಂಪತಿಗಳ ಏಕ ಮಾತ್ರ ಪುತ್ರ ಸೂರ್ಯಮುಳುಗುತ್ತಿದ್ದರೂ, ಬಾಲಕನೇಕೆ ಬರಲಿಲ್ಲವೆಂಬ ಚಿಂತೆಯಿಂದ ತಾಯಿ ಗಿರಿಯಮ್ಮ ಮನೆಯ ಹೊರಗೆ–ಒಳಗೆ ಓಡಾಡುತ್ತಿದ್ದಳು ಆ ಹೊತ್ತಿಗೆ ಲಕ್ಷ್ಮೀನಾರಾಯಣ ದನಗಳನ್ನು ಕೊಟ್ಟಿಗೆಯಲ್ಲಿ ಅಟ್ಟಿ ಮನೆಯೊಳಕ್ಕೆ ಉತ್ಸಾಹದಿಂದ ನುಗ್ಗಿದನು

ಸ್ವಾಮಿಗಳ ಪ್ರಶ್ನೆ, ತನ್ನ ಉತ್ತರದ ಚಾತುರ್ಯಗಳನ್ನು ಲಕ್ಷ್ಮೀನಾರಾಯಣ ಕಣ್ಣರಳಿಸಿ ವಿವರಿಸಿದನು ಅಪರಿಚಿತ ಯತಿಯೊಬ್ಬರು ತನ್ನ ಮಗನ ಬುದ್ಧಿವಂತಿಕೆಯನ್ನು ಮೆಚ್ಚಿ “ಮೇನೆಯಲ್ಲಿ ಕುಳಿತುಕೊ” ಎಂದು ಹೇಳಿದುದನ್ನು ಕೇಳಿದ ತಾಯಿಗೆ ಕಳವಳ ಉಂಟಾಯಿತು

ಅಂದು ಅಬ್ಬೂರಿಗೆ ಶ್ರೀರಂಗದಲ್ಲಿ ನೆಲೆಸಿದ್ದ ಸ್ವರ್ಣವರ್ಣತೀರ್ಥರು ಆಗಮಿಸಿದ್ದರು ದ್ವೈತ ಸಿದ್ಧಾಂತವನ್ನು ಭಾರತ ದೇಶದಲ್ಲಿ ಸ್ಥಾಪಿಸಿದ ಕನ್ನಡಿಗರಾದ ಶ್ರೀಮಧ್ವಾಚಾರ್ಯರ ಶಿಷ್ಯರಾದ ಪದ್ಮನಾಭ ತೀರ್ಥರ ಮಠದ ಪೀಳಿಗೆಯಲ್ಲಿ ಏಳನೆಯ ಯತಿಗಳಾಗಿ ಮೆರೆಯುತ್ತಿದ್ದವರು – ಸ್ವರ್ಣವರ್ಣ ತೀರ್ಥರು ಅಬ್ಬೂರಿನಲ್ಲಿ ನೆಲೆಸಿದ್ದ ಪುರುಷೋತ್ತಮ ತೀರ್ಥರ ದರ್ಶನಕ್ಕೆಂದು ಅವರು ಅಬ್ಬೂರಿಗೆ ಆಗಮಿಸಿದ್ದರು

ಪುರುಷೋತ್ತಮ ತೀರ್ಥರೊಡನೆ ಸ್ವರ್ಣವರ್ಣ ತೀರ್ಥರು ಮಾತುಗಳನ್ನಾಡುತ್ತಾ ಅಬ್ಬೂರಿನ ದಾರಿಯಲ್ಲಿ ನಡೆದ ಘಟನೆಯನ್ನು ವಿವರಿಸಿ ಲಕ್ಷ್ಮೀನಾರಾಯಣನನ್ನು ಹೊಗಳಿದರು ಪುರುಷೋತ್ತಮ ತೀರ್ಥರೊಡನಿದ್ದ ಬಾಲಯತಿ ಬ್ರಹ್ಮಣ್ಯ ತೀರ್ಥರನ್ನು ಕಂಡು ಅಂತಹ ವರ್ಚಸ್ವಿ ತಮ್ಮಗೊಬ್ಬ ದೊರೆತರೆ ಶಿಷ್ಯನನ್ನಾಗಿ ಸ್ವೀಕರಿಸಬೇಕೆಂಬ ಹಂಬಲವೂ ಸ್ವರ್ಣವರ್ಣರಿಗೆ ಮೂಡಿತು

## ಬಯಸದೆ ಬಂದ ಪಟ್ಟ

ಅಬ್ಬೂರು ಬೆಂಗಳೂರು ಜಿಲ್ಲೆಯ ಚೆನ್ನಪಟ್ಟಣ ತಾಲೂಕಿನಲ್ಲಿರುವ ಒಂದು ಸಣ್ಣ ಗ್ರಾಮ, ಊರಿಗೆ ಯಾವ ಹಿರಿಯರು ಬಂದರೂ, ಊರಿನ ಜನರು ತಪ್ಪದೆ ಅವರ ಅನುಗ್ರಹ ಬಯಸಿ ದರ್ಶನಮಾಡುತ್ತಿದ್ದರು ಅಂದು ಸ್ವರ್ಣವರ್ಣ

ಡಾ|| ಕೆ. ಗೋಕುಲನಾಥ್

ತೀರ್ಥರ ಆಶೀರ್ವಾದವನ್ನು ಪಡೆಯಲು ಶೇಷಗಿರಿ ಪತ್ನೀಪುತ್ರ ಸಮೇತನಾಗಿ ಆಗಮಿಸಿದನು ಅದೊಂದು ಒಳ್ಳೆಯ ಶುಭ ಮುಹೂರ್ತವಾಗಿತ್ತು ಸ್ವರ್ಣವರ್ಣರು ಲಕ್ಷ್ಮೀನಾರಾಯಣನನ್ನು ಶಿಷ್ಯನನ್ನಾಗಿ ಸ್ವೀಕರಿಸುವ ಕುತೂಹಲವನ್ನು ವ್ಯಕ್ತಪಡಿಸಿದರು ಪುರುಷೋತ್ತಮತೀರ್ಥರು ಶೇಷಗಿರಿಯನ್ನು ಹತ್ತಿರ ಕರೆದು,

“ನಿನ್ನ ಮಗ ತುಂಬ ಬುದ್ಧಿವಂತ, ಅವನಿಗೆ ಮುಂಜಿಯನ್ನು ಮಾಡಿ, ಸೂಕ್ತ ವಿದ್ಯಾಭ್ಯಾಸ ಮಾಡಿಸಲು ಸ್ವರ್ಣವರ್ಣತೀರ್ಥರು ಸಿದ್ಧರಿದ್ದಾರೆ ನಿನ್ನ ಪತ್ನಿಯ ಅಭಿಪ್ರಾಯವನ್ನು ತಿಳಿದು ತೀರ್ಮಾನವನ್ನು ತೆಗೆದುಕೊ ಹುಡುಗ ಶಾಸ್ತ್ರ ಸಿದ್ಧಾಂತ ವಿಚಾರಗಳಲ್ಲಿ ಪಂಡಿತನಾದರೆ ಮೆರೆದ

ಕನ್ನಡ ಸಾಹಿತ್ಯದಲ್ಲಿ ಶ್ರೀಪಾದರಾಜರದು ಹಿರಿಯ ಹೆಸರು ಮುಳಬಾಗಿಲ ಮೂಲೆಗೆ ನಾಡಿನೆಲ್ಲ ವಿದ್ವದಾಕಾಂಕ್ಷಿಗಳನ್ನು ಆಕರ್ಷಿಸಿ ಕನ್ನಡದಲ್ಲೂ ವೇದಾರ್ಥ ವೈವಿಧ್ಯವನ್ನು ಪ್ರಕಟಿಸಬಹುದೆಂಬುದನ್ನು ಐದುನೂರು ವರ್ಷಗಳ ಹಿಂದೆಯೇ ತೋರಿಕೊಟ್ಟು ನಡೆದ ಮಹಾನ್ ವ್ಯಕ್ತಿತ್ವ ತಮಿಳು ಆಳ್ವಾರರಂತೆ ಕನ್ನಡದ ವಚನಕಾರರಂತೆ ಆಡುಭಾಷೆಯಲ್ಲಿ ಭಕ್ತಿಯನ್ನು ಸುಗಮಗೊಳಿಸಿದವರು ಅಂತಹ ಹಿರಿಯರ ಐದುನೂರನೆಯ ಆರಾಧನೆ ಈ ಬಾರಿ ನಡೆಯುತ್ತಿದೆ ಮುಳಬಾಗಿಲಿನ ನರಸಿಂಹ ತೀರ್ಥದಲ್ಲಿ ಕನ್ನಡಿಗರ ಧಾರ್ಮಿಕ ಆಸಕ್ತಿ ಮರೆಯಲಾರದ ಶ್ರೀಪಾದರಾಜರ ಆರಾಧನೆಯಲ್ಲಿ ಸಪ್ತಗಿರಿಯೂ ಪಾಲುಗೊಳ್ಳುತ್ತದೆ – ಸಂ ||

ಗುರುಪೀಠವನ್ನಲಂಕರಿಸುವ ಸಂಭವ ಉಂಟು" ಎಂದು ನುಡಿದರು

ಸ್ವಾಮಿಗಳು ಶೇಷಗಿರಿಯನ್ನು ಆಗ್ರಹ ಪಡಿಸಲಿಲ್ಲ, ಆ ದಂಪತಿಗಳು ಯತಿವರೇಣ್ಯರಲ್ಲಿ ವಿದ್ಯಾಭ್ಯಾಸ ಮಾಡಿಸುವ ಒಳ್ಳೆಯ ಅವಕಾಶವನ್ನು ಮಗನಿಗೆ ಕಳೆಯುವ ಯೋಚನೆ ಮಾಡಲಿಲ್ಲ ಶ್ರೀಮಠಕ್ಕೆ ಲಕ್ಷ್ಮೀನಾರಾಯಣನನ್ನು ಒಪ್ಪಿಸಿದರು ಶಿಷ್ಯನೊಡನೆ ಗುರುಗಳು ಶ್ರೀರಂಗಕ್ಕೆ ಹಿಂದಿರುಗಿದರು

ಸ್ವರ್ಣವರ್ಣ ತೀರ್ಥರ ಸಂತೋಷಕ್ಕೆ ಅಂದು ಪಾರವಿರಲಿಲ್ಲ ಶುಭ ಮುಹೂರ್ತದಲ್ಲಿ ಲಕ್ಷ್ಮೀನಾರಾಯಣನ ಉಪನಯನವಾದ ಮೇಲೆ ವೇದ ವಿದ್ಯಾಭ್ಯಾಸ ಸಾಂಗವಾಗಿ ನೆರವೇರಿತು ಕಾಲಕ್ರಮದಲ್ಲಿ ಲಕ್ಷ್ಮೀನಾರಾಯಣನಿಗೆ ಸನ್ಯಾಸ ದೀಕ್ಷೆಯನ್ನಿತ್ತು ಅವನು ತಮ್ಮ ಉತ್ತರಾಧಿಕಾರಿಯೆಂದು ಗುರುಗಳು ಘೋಷಿಸಿದರು ಅನಂತರ ವಿಬುಧೇಂದ್ರ ತೀರ್ಥರ ಬಳಿಗೆ ಕಳುಹಿಸಿ ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಸಕಲ ಗ್ರಂಥಗಳನ್ನೂ ಅಧ್ಯಯನ ಮಾಡಿಸಿದರು



ಹುಡುಗ ಲಕ್ಷ್ಮೀನಾರಾಯಣ, ಶ್ರೀಲಕ್ಷ್ಮೀನಾರಾಯಣ ತೀರ್ಥ ಎಂದು ಪ್ರಸಿದ್ಧಿ ಪಡೆದನು

ಕರ್ನಾಟಕದ ಉತ್ತರ ಭಾಗದಲ್ಲಿ ರಾಯಚೂರು ಜಿಲ್ಲೆ ಇದೆ ಈ ಜಿಲ್ಲೆಯಲ್ಲಿರುವ 'ಕೊಪ್ಪ' ಇಂದಿಗೂ ಒಂದು ಪವಿತ್ರಯಾತ್ರಾ ಸ್ಥಳವಾಗಿದೆ ಇಲ್ಲಿ ನರಸಿಂಹ ದೇವಾಲಯ ಉಂಟು ಇಲ್ಲಿಗೆ ಒಮ್ಮೆ ವಿಬುಧೇಂದ್ರ ತೀರ್ಥರು, ರಘುನಾಥ ತೀರ್ಥರು ಮತ್ತು ಲಕ್ಷ್ಮೀನಾರಾಯಣ ತೀರ್ಥರು ಆಗಮಿಸಿದರು ಅಂದು ರಘುನಾಥ ತೀರ್ಥರು ಬಹು ದೊಡ್ಡ ವಿದ್ವಾಂಸರೆಂದು ಪ್ರಖ್ಯಾತರಾಗಿದ್ದರು ಅವರೆದುರು ಲಕ್ಷ್ಮೀನಾರಾಯಣ ತೀರ್ಥರು ವಯಸ್ಸಿನಲ್ಲಿ ಚಿಕ್ಕವರಾದರೂ ಪಾಂಡಿತ್ಯದಲ್ಲಿ ಘನತೆಯನ್ನು ಪಡೆದಿದ್ದುದರಿಂದ ಅತ್ಯಮೋಘವಾಗಿ ದ್ವೈತ ಸಿದ್ಧಾಂತವನ್ನು ತರ್ಕಬದ್ಧವಾಗಿ ಮಂಡಿಸಿದರು ಬಾಲಯತಿಗಳ ಪಾಂಡಿತ್ಯಕ್ಕೆ ತಲೆದೂಗಿದ ರಘುನಾಥತೀರ್ಥರು ಮನಮೆಚ್ಚಿ ಹೊಗಳಿದರು ಆದರೆ ಲಕ್ಷ್ಮೀನಾರಾಯಣ ತೀರ್ಥರಿಗೆ ಇದರಿಂದ ಅಹಂಕಾರ ಉಂಟಾಗಲಿಲ್ಲ ವಿದ್ಯೆಗೆ ತಕ್ಕ ವಿನಯ ಅವರಲ್ಲಿತ್ತು ಆದುದರಿಂದ "ತಮ್ಮಂತಹ ಶ್ರೀಪಾದರಿಂದ ಅನುಗ್ರಹಕ್ಕೆ ಪಾತ್ರನಾದುದು ಮಹಾ ಪುಣ್ಯ" ಎಂದು ನಮ್ರರಾಗಿ ಲಕ್ಷ್ಮೀನಾರಾಯಣತೀರ್ಥರು ನುಡಿದರು ಆಗ,

"ನಾವು ಶ್ರೀಪಾದರಾದರೆ ನೀವು ಶ್ರೀಪಾದರಾಜರು" ಎಂದು ರಘುನಾಥ ತೀರ್ಥರು ಸಂತೋಷದಿಂದ ಕೊಂಡಾಡಿದರು ಅಂದಿನಿಂದ ಲಕ್ಷ್ಮೀನಾರಾಯಣ ತೀರ್ಥರು 'ಶ್ರೀಪಾದರಾಜ' ರೆಂದೇ ಪ್ರಸಿದ್ಧರಾದರು

ಶ್ರೀಪಾದರಾಜರು ಗುರುಗಳಿಂದ 'ಭಲೇ' ಎನಿಸಿಕೊಂಡ ಮೇಲೆ ಶ್ರೀರಂಗಕ್ಕೆ ಹಿಂದಿರುಗಿದರು ಅನಂತರ ಕೆಲವು ದಿನಗಳಲ್ಲಿ ಇವರ ಗುರುಗಳಾದ ಸ್ವರ್ಣವರ್ಣ ತೀರ್ಥರು ವೃಂದಾವನಸ್ಥರಾದರು (ಸನ್ಯಾಸಿಗಳು ಮೃತರಾದ ಮೇಲೆ ಅವರ ದೇಹವನ್ನ ಶಾಸ್ತ್ರೋಕ್ತವಾಗಿ ಭೂಗತ ಮಾಡಿ ಅದರ ಒಂದು ಕಲ್ಲಿನ ಸ್ಮಾರಕವನ್ನು ನಿರ್ಮಿಸುತ್ತಾರೆ ಆ ಸ್ಮಾರಕದಲ್ಲಿ ಸಂನ್ಯಾಸಿಗಳ ಒಂದು ಅಂಶ ಯಾವಾಗಲೂ ಅಲ್ಲಿದ್ದು ಅದನ್ನು ಪೂಜಿಸುವವರಿಗೆ ಕೃಪೆ ತೋರುವರೆಂಬ ದೃಢ ವಿಶ್ವಾಸ ಇಂದಿಗೂ ಉಂಟು ಆದುದರಿಂದ ಸನ್ಯಾಸಿಗಳು ಮೃತರಾದರೆ 'ವೃಂದಾವನಸ್ಥ' ರಾದರೆಂದು ಕರೆಯುವ ವಾಡಿಕೆ ಇದೆ )

ಶ್ರೀಪಾದರಾಜರು ಕನ್ನಡ ದೇಶದಲ್ಲಿ ಹುಟ್ಟಿ ಬೆಳೆದಿದ್ದವರು ತಾಯ್ನಾಡಿನಿಂದ ದೂರವಿದ್ದ ಶ್ರೀರಂಗದಲ್ಲಿ ಜೀವಿಸಲು ಅವರಿಗೆ ಮನಸ್ಸು ಬರಲಿಲ್ಲ ಕರ್ನಾಟಕ ಪ್ರಾಂತ್ಯದಲ್ಲಿ ತಮ್ಮ ತಪೋವನಕ್ಕೆ ಅನುಕೂಲವಿರುವ ಸ್ಥಳವೊಂದನ್ನು ನೋಡಿ ನೆಲೆಸಬೇಕೆಂದು ಅವರು ನಿಶ್ಚಯಿಸಿದರು

## ಮುಳಬಾಗಿಲು

ಕರ್ನಾಟಕ ರಾಜ್ಯದ ಕೋಲಾರ ಜಿಲ್ಲೆಯ ಬಳಿ 'ಮುಳಬಾಗಿಲು' ಮಠದ ಸ್ಥಾಪನೆಗೆ ಸರಿಯಾದ ಸ್ಥಳವೆಂದು ಶ್ರೀಪಾದರಾದರಿಗೆ ಭಾಸವಾಯಿತು ಇಲ್ಲಿ ಅಕ್ಷೋಭ್ಯ ತೀರ್ಥರು ಶ್ರೀಯೋಗನರಸಿಂಹನನ್ನು ಅಂಗಾರದಲ್ಲಿ ಬರೆದು ಪ್ರತ್ಯಕ್ಷೀಕರಿಸಿಕೊಂಡು ಸಿದ್ಧಾಂತವಾದದಲ್ಲಿ ವಿದ್ಯಾರಣ್ಯರನ್ನು ಸೋಲಿಸಿದರೆಂಬ ಐತಿಹ್ಯವಿತ್ತು ಪರಮಾತ್ಮನು ಭಕ್ತರಿಗೆ ಕೃಪೆದೋರಿದ ಸ್ಥಳ ತಮ್ಮ ತಪೋಜೀವನಕ್ಕೂ ಉತ್ತಮವೆಂದು ಭಾವಿಸಿದ ರಾಜರು ಮುಳಬಾಗಿಲಿನ ಹೊರವಲಯದಲ್ಲಿ ಮಠವನ್ನು ಕಟ್ಟಿಸಿ, ಸರೋವರವನ್ನು ನಿರ್ಮಿಸಿ 'ನರಸಿಂಹ ತೀರ್ಥ' ವೆಂದು ಹೆಸರಿಟ್ಟು ತಮ್ಮ ಪೀಠದ ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡರು ಇಂದಿಗೂ ಶ್ರೀಪಾದರಾಜರ ಮಠ ಮುಳಬಾಗಿಲಿನಲ್ಲಿಯೇ ಮುಂದುವರಿಯುತ್ತಿದೆ

ಶ್ರೀಪಾದರಾಜರು ಮುಳಬಾಗಿಲಿನಲ್ಲಿ ನಲೆಸಿದುದರಿಂದ ಕನ್ನಡಿಗರಿಗೆ ತುಂಬ ಪ್ರಯೋಜನವಾಯಿತು ವಿದ್ಯಾಭ್ಯಾಸವನ್ನು ಇವರ ನೇತೃತ್ವದಲ್ಲಿ ಮುಂದುವರಿಸಲು ಅನೇಕರು ಮುಳಬಾಗಿಲಿಗೆ ಧಾವಿಸಿದರು ವೇದ, ವೇದಾಂಗಗಳನ್ನು ಸರಳವಾಗಿ ಪಾಠ ಹೇಳುವ ಜಾಣ್ಮೆ ಅವರಿಗಿತ್ತು ಅನ್ಯಮತೀಯರ ತತ್ತ್ವಗಳನ್ನು ಶುದ್ಧ ಮನಸ್ಸಿನಿಂದ ವಿಮರ್ಶಿಸಿ, ವಾದಿಗಳೊಡನೆ ವಾದಿಸಿ ಅನೇಕಬಾರಿ ಜಯವನ್ನು ಇವರು ಪಡೆದರು 'ವಾಗ್ವಜ್ರ' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿ ತಮ್ಮ ಪಾಂಡಿತ್ಯದ ಆಳ ಅಗಲಗಳನ್ನು ಅದರಲ್ಲಿ ತೋರಿದರು

## ಹರಿದಾಸ ಸಾಹಿತ್ಯೋದಯ

ಶ್ರೀಪಾದರಾಜರು ಹಿರಿಯ ಸಂಸ್ಕೃತ ವಿದ್ವಾಂಸರಾಗಿದ್ದರೂ ಕನ್ನಡದ ಬಗ್ಗೆ ಅವರಿಗೆ ಅಲಕ್ಷ್ಯವಿರಲಿಲ್ಲ ಸಂಸ್ಕೃತ ಭಾಷೆ ತಿಳಿಯದ ಸಾಮಾನ್ಯರಿಗೆ ದ್ವೈತಸಿದ್ಧಾಂತವನ್ನು ಸರಳವಾಗಿ ತಿಳಿಸಬೇಕೆಂಬ ದೃಷ್ಟಿ ಅವರ ಮನಸ್ಸಿನಲ್ಲಿ ಮೊಳಕೆಯೊಡೆಯಿತು ತತ್ತ್ವಶಾಸ್ತ್ರದ ವಿಷಯಗಳನ್ನು ಕಾವ್ಯ ಶೈಲಿಯಲ್ಲಿ, ಸಂಗೀತದ ರಾಗ, ತಾಳಗಳ ಚೌಕಟ್ಟಿನಲ್ಲಿ 'ಕೀರ್ತನೆ'ಗಳ ಮೂಲಕ ಪ್ರಚಾರ ಮಾಡಿದರೆ, ಎಲ್ಲ ಜನರ ಹೃದಯಕ್ಕೆ ತುಟ್ಟುವುದೆಂಬ ಗುಟ್ಟನ್ನು ಮೊದಲು ಕರ್ನಾಟಕದಲ್ಲಿ ಕಂಡು ಕೊಂಡವರೆಂದರೆ – ಶ್ರೀಪಾದರಾಜರು

ಆದುವರೆಗೆ ಕನ್ನಡ ಸಾಹಿತ್ಯದಲ್ಲಿ ಇಂತಹ ಪ್ರಯೋಗವನ್ನು ಯಾವ ಕವಿಗಳೂ ಮಾಡಿರಲಿಲ್ಲ ಕನ್ನಡದಲ್ಲಿ ಕೃತಿಗಳನ್ನು ಕೀರ್ತನೆ, ಉಗಾಭೋಗ ಸುಳಾದಿ ವೃತ್ತನಾಮಗಳೆಂಬ ರೂಪಗಳಲ್ಲಿ ಇವರು ರಚಿಸಿದರು ಶ್ರೀಹರಿಯ ಭಕ್ತರಾಗಿ ಕನ್ನಡದಲ್ಲಿ ಭಕ್ತಿ ಸಾಹಿತ್ಯ ರಚಿಸಿದವರನ್ನು ಹರಿದಾಸರೆಂದು ಅವರ ಸಾಹಿತ್ಯವನ್ನು ಹರಿದಾಸ ಸಾಹಿತ್ಯ ವೆಂದೂ ನಾವು ಗುರುತಿಸುತ್ತೇವೆ ಶ್ರೀಪಾದರಾಜರು ಕೀರ್ತನ ಸಾಹಿತ್ಯವನ್ನು ರಚಿಸಿ ಪ್ರತಿ ನಿತ್ಯವೂ ಪೂಜೆಯ ಕಾಲದಲ್ಲಿ ಆ ಹಾಡಗಳನ್ನ ಹಾಡಿಸುತ್ತಿದ್ದರು, ಅಂದು ಕನ್ನಡದಲ್ಲಿ ಪರಮಾತ್ಮನನ್ನು ಪೂಜಾಕಾಲದಲ್ಲಿ ಸ್ಮರಿಸುವುದು ತಪ್ಪೆಂದು ಅನೇಕರು ಭಾವಿಸಿದ್ದರಂತೆ ಆದರೆ ಶ್ರೀಪಾದರಾಜರು 'ಪರಮಾತ್ಮನು ಭಕ್ತಿಗೆ ಒಲಿಯುವನೇ ವಿನಾ ಭಾಷೆಗಲ್ಲ' ಎಂಬುದನ್ನು ವ ನಡಟ್ಟು ಮಾಡಿದರು ಅಲ್ಲದೆ ಮುಂದೆ ಇವರ ಶಿಷ್ಯರಾದ ವ್ಯಾಸರಾಜರಿಗೂ ಈ ದೊಡ್ಡ ಕಾರ್ಯವನ್ನ ಮುಂದುವರಿಸುವಂತೆ ಉಪದೇಶಿಸಿದರು ವ್ಯಾಸರಾಜರು ಗುರುಗಳ ಆಜ್ಞೆಯನ್ನು ಮೀರದೆ ದಾಸಸಾಹಿತ್ಯ ಪರಂಪರೆಯನ್ನು ಮುಂದುವರಿಸಿದರು ವ್ಯಾಸರಾಜರ ಶಿಷ್ಯರಾದ ಪುರಂದರದಾಸರು ಮತ್ತು ಕನಕದಾಸರು ಹರಿದಾಸ ಸಾಹಿತ್ಯವನ್ನು ಉನ್ನತ ಶಿಖರ ಕ್ಕೇರಿಸಿದರು

## ರಂಗವಿಠಲ

ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ 'ರಂಗ ವಿಠಲ' ಎಂಬ ಅಂಕಿತವನ್ನು ಪ್ರಯೋಗಿಸಿದ್ದಾರೆ 'ಅಂಕಿತ' ಎಂದರೆ ಗುರುತು ಎಂದರ್ಥ ಹರಿದಾಸರು ತಾವು ತುಂಬ ಭಕ್ತಿಯಿಂದ ಪೂಜೆಮಾಡುತ್ತಿದ್ದ ವಿಷ್ಣುವಿನ ಮೂರ್ತಿಯೊಂದರ ಹೆಸರನ್ನು ತಮ್ಮ ಪ್ರತಿಯೊಂದು ರಚನೆಯ ಕೊನೆಯಲ್ಲಿ ಪ್ರಯೋಗಿಸಿ ತಮ್ಮ ಜೀವನದ ಎಲ್ಲ ಕಾರ್ಯಗಳನ್ನು ಭಗವಂತನಿಗೆ ಅರ್ಪಿಸುತ್ತಿದ್ದರು

ಭೀಮರತಿ ನದೀ ತೀರದಲ್ಲಿ ಭೂಮಿಯಲ್ಲಿ ಮರೆಯಾಗಿದ್ದ 'ವಿಠಲ' ವಿಗ್ರಹ ಇವರಿಗೆ ಒಮ್ಮೆ ದೊರೆಯಿತು. ಅಂದಿನಿಂದ ರಂಗವಿಠಲನನ್ನು ತುಂಬ ಭಕ್ತಿಯಿಂದ ಶ್ರೀಪಾದರಾಜರು ಪೂಜೆ ಮಾಡುತ್ತಿದ್ದರು ಶ್ರೀರಂಗದಲ್ಲಿ ಬಹುಕಾಲವಿದ್ದುದರಿಂದ ಅವರು ಶ್ರೀರಂಗನನ್ನು ಮರೆಯುವುದು ಸಾಧ್ಯವಾಗಿರಲಿಲ್ಲ ಆದುದರಿಂದ 'ರಂಗವಿಠಲ' ಎಂಬ ಅಂಕಿತವನ್ನು ಕನ್ನಡ ಕೃತಿಗಳಲ್ಲಿ ಪ್ರಯೋಗಿಸಿದರೆನಿಸುತ್ತದೆ

## ಭಕ್ತ ಹೃದಯ

ಶ್ರೀಪಾದರಾಜರು ಕನ್ನಡದಲ್ಲಿ ರಚಿಸಿದ ಮೂರು ಸುಳಾದಿಗಳು, ಹದಿನೈದು ಉಗಾಭೋಗಗಳು, ಎಂಭತ್ತೆರಡು ಕೀರ್ತನೆಗಳು ಮತ್ತು ಒಂದು ದಂಡಕ ಇದುವರೆಗೆ ದೊರೆತಿದೆ ಶ್ರೀಪಾದರಾಜರ ರಚನೆಗಳನ್ನು ಪರಿಶೀಲಿಸಿದರೆ ಅವರು ಪ್ರತಿಯೊಂದು ಕೃತಿ ಪುಷ್ಪವನ್ನು ತಮ್ಮ ಭಕ್ತಿಯ ಪರಿಮಳದಲ್ಲದ್ದಿ ರಂಗವಿಠಲನ ಪಾದಕಮಲಗಳಲ್ಲಿ ಅರ್ಪಿಸಿದಂತೆ ತೋರುತ್ತದೆ ಶ್ರೀಹರಿಯ ಅಚಿಂತ್ಯ ಅದ್ಭುತ ಶಕ್ತಿ ಸಾಮರ್ಥ್ಯಗಳನ್ನರಿತ ಬೆರಗಾಗಿ, ಅವನನ್ನು ತಮ್ಮ ಹೃದಯದಲ್ಲಿ ಕಾಣಬೇಕೆಂಬ ಹಂಬಲದಿಂದ ಅವರು ಪೂಜಿಸುತ್ತಿದ್ದರು ಸಾಮಾನ್ಯವಾಗಿ ಜನರು ತಮ್ಮ ಜೀವನದಲ್ಲಿ ಬಂದ ಕಷ್ಟಗಳನ್ನು ಪರಿಹರಿಸಿಕೊಳ್ಳಲೆಂದು ಭಗವಂತನನ್ನು ಪೂಜಿಸುತ್ತಾರೆ ಇಂತಹವರ ಭಕ್ತಿ, ಕಷ್ಟಗಳು ದೂರಾಗುವವರೆಗೆ ಮಾತ್ರ ಇರುತ್ತದೆ ಕಷ್ಟಗಳು ಪರಿಹಾರವಾಗದಿದ್ದರೆ ದೇವರ ಮೇಲೆ ಕೋಪಿಸಿಕೊಂಡು ಪೂಜೆಯನ್ನು ನಿಲ್ಲಿಸುತ್ತಾರೆ ಇದರಿಂದ ಬದುಕಿನಲ್ಲಿ ಬರುವ ಕಷ್ಟಗಳನ್ನು ಎದುರಿಸಲು ಬೇಕಾದ ಧೈರ್ಯವಿಲ್ಲದೆ ದಃಖಿಸುವಂತಾಗುತ್ತದೆ ಜೀವನದಲ್ಲಿ ದುಃಖವನ್ನನ ಬವಿಸದೆ ಶಾಂತಿಯಿಂದ ಬದುಕಬೇಕಾದರೆ ಪರಮಾತ್ಮನ ದರ್ಶನಕ್ಕಾಗಿ ಮಾತ್ರ ಅವನನ್ನು ಪೂಜಿಸಿ ಕಷ್ಟಗಳನ್ನು ಧೈರ್ಯದಿಂದ ಎದುರಿಸುವ ಸ್ಥೈರ್ಯವನ್ನು ಮನಸ್ಸು ಹೊಂದಿರಬೇಕೆಂದು ಶ್ರೀಪಾದರಾಜರು ಉಪದೇಶಿಸಿದ್ದಾರೆ 'ಇಟ್ಟಾಂಗೆ ಇರುವೆನೋ ಹರಿಯೆ' ಎಂಬುದು ಶ್ರೀಪಾದರಾಜರ ನಿಲುವು ಪರಮಾತ್ಮನ ಎದುರಿಗೆ ಬೇಡಿಕೆಗಳ ಪಟ್ಟಿಯನ್ನು ಅವರು ಇಡುತ್ತಿರಲಿಲ್ಲ ಪರಮಾತ್ಮನನ್ನು ಚಿತ್ತಶಾಂತಿಯಿಂದ ಸ್ಮರಿಸುವ, ಪೂಜಿಸುವ ಭಜಿಸುವುದರ ಮಹೋಲಿಕ ಆನಂದವನ್ನು ಅವರು ಅನುಭವಿಸುತ್ತಿದ್ದರು ಆದರೆ ಭಗವಂತನನ್ನು ಪೂಜಿಸಲು ವಿಘ್ನ ಒದಗಿದಾಗ, ಚಿತ್ತ ಕಲಕಿದಾಗ ಅವರಿಗೆ ದುಃಖ ಉಂಟಾಗುತ್ತಿತ್ತು ಆಗ ಅವರು "ಇದನಾದರು (ಭಕ್ತಿ) ಕೊಡಸಿದ್ದರೆ ನಿನ್ನ ಪದಕಮಲವ ನಂಬಿ ಭಜಿಸುವುದೆಂತೊ" ಎಂದು ಪರಮಾತ್ಮನಲ್ಲಿ ಪ್ರಶ್ನೆ ಮಾಡುತ್ತಾ "ರಂಗ ವಿಠಲ ನಾ ನಿನ್ನ ಬಾಗಿಲ ಕಾಯುವ ಭಾಗ್ಯ ಕೊಡು" ಎನ್ನುತ್ತಿದ್ದರು ಈ ಕೃತಿಯಲ್ಲಿ ತಾವು ರಂಗವಿಠಲನನ್ನು 'ರಾಜ್ಯಭೋಗಗಳು' ಬೇಕೆಂದು, 'ಸಂಬಳ ಸಾಲದಾಯಿತೆಂದು' 'ಹಿತದಿಂದ ಇರಬೇಕೆಂದು' ಗ್ರಾಸ (ಆಹಾರ) ಬೇಕೆಂದು ಬೇಡಿ' ಪ್ರಾರ್ಥಿಸಲಿಲ್ಲವೆಂದು ಸ್ಪಷ್ಟ ಪಡಿಸಿದ್ದಾರೆ

## ಭಗವಂತನ ಹಂಬಲ

ರಂಗ ವಿಠಲನ ದರ್ಶನಕ್ಕಾಗಿ ಎಷ್ಟು ಬಗೆ ಪ್ರಾರ್ಥಿಸಿದರೂ ಅವನು ಕಾಣದಿರಲು ಶ್ರೀಪಾದ ರಾಜರಿಗೆ ದುಃಖ ಹೆಚ್ಚಾಯಿತು ಮಗುವೊಂದು ತನಗೆ ಬೇಕಾದ ವಸ್ತು ದೊರೆಯದಿರಲು ಹೇಗೆ




ಅಳುವುದೋ, ಮುಷ್ಕರ ಹೂಡುವುದೋ ಅದ ರಂತೆಯೇ ಹರಿದಾಸರು ಭಗವಂತನ ದರ್ಶನಾನುಭವ ದೊರೆಯದಿದ್ದಾಗ ಅಳುತ್ತಾರೆ ಹೆದರಿಸುತ್ತಾರೆ 'ಉರಿಯೊಳಗೆ ಬಿದ್ದು ಶರೀರವ ಕಳೆಯಲೋ ಕರಗಸದಿ ಶಿರಗೊಯ್ಯಲೋ' ಎಂದು ಪ್ರಶ್ನಿಸುತ್ತಾ, ಅವರು ಹೀಗೆ ಮೊರೆ ಇಟ್ಟರು

ನಾ ನಿನಗೇನು ಬೇಡುವುದಿಲ್ಲ ಎನ್ನ
ಹೃದಯ ಕಮಲದೊಳು ನಿಂದಿರೊ
ಹರಿಯೆ ॥ ಪ ॥

ಬುದ್ಧಿ ನಿನ್ನೊಳು ಕುಣಿದಾಡಲಿ ಎನ್ನ
ಚಿತ್ತ ನಿನ್ನಲಿ ನಲಿದಾಡಲಿ ಹರಿಯೆ
ಭಕ್ತಜನರ ಸಂಗವು ದೊರಕಲಿ ರಂಗ
ವಿಠಲ ನಿನ್ನ ದಯವಾಗಲಿ ಹರಿಯೆ ॥

ಭಗವಂತನನ್ನು ಅವರು ಹೇಗೆ ಹಂಬಲಿಸುತ್ತಿದ್ದ ರೆಂಬುದನ್ನು ಇಂತಹ ರಚನೆಗಳಲ್ಲಿ ಕಾಣಬಹುದು

ಶ್ರೀಪಾದರಾಜರು ಮುಳಬಾಗಿಲಿಗೆ ಬಂದರೂ ಶ್ರೀರಂಗನಾಥನನ್ನೂ ಮರೆಯಲಿಲ್ಲ 'ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ', 'ಶ್ರೀರಂಗ ವಿಠಲನ ಶ್ರೀಮುಕುಟವೆ ಶರಣು', 'ರಂಗನಾಥನ ನೋಡುವ ಬನ್ನಿ', 'ರಂಗ ಮನೆಗೆ ಬಾರೋ ಕೃಂಬಾಗ', 'ತಾ ತಾ ತಾ ತಾ ತಾ ರಂಗ ನಿನ್ನ ಪಾದ', 'ಇಕ್ಕೋ ನೋಡಿ ರಂಗನಾಥನ ಚಿಕ್ಕ ಪಾದವ', ಮೊದಲಾದ ಕೃತಿಗಳಲ್ಲಿ ಶ್ರೀಪಾದರಾಜರು ರಂಗವಿಠಲನನ್ನು ನೇರವಾಗಿ ಭಜಿಸಿದ್ದಾರೆ.

ರಂಗ ವಿಠಲನನ್ನು ಮುಡಿಯಿಂದ ಅಡಿಯವರೆಗೆ ವರ್ಣಿಸಿರುವ 'ಶ್ರೀರಂಗ ವಿಠಲನ ಶ್ರೀಮುಕುಟಕೆ ಶರಣು' ಎಂಬ ಕೃತಿ ವರ್ಣನೆಯ ದೃಷ್ಟಿಯಿಂದ ತುಂಬ ಚೆನ್ನಾಗಿದೆ ಪರಮಾತ್ಮನು ತನ್ನ ಅವತಾರಗಳಲ್ಲಿ ತೋರಿದ ಮಹಾತ್ಮೆಯನ್ನು ಚಿತ್ರಿಸುತ್ತಾ 'ಇಕ್ಕೋ ನೋಡೆ ರಂಗನಾಥನ ಚಿಕ್ಕ ಪಾದವ, ಸಿಕ್ಕಿತೆ ಶ್ರೀಲಕ್ಷ್ಮಿಪತಿಯ ದಿವ್ಯಪಾದವ' ಎಂಬ ಸಾಲುಗಳಲ್ಲಿ ನಾಟಕೀಯತೆ ರಮ್ಯವಾಗಿದೆ ತಾವೊಬ್ಬರು ರಂಗನಾಥನನ್ನು ನೋಡಿ ತೃಪ್ತಿ ಹೊಂದದೆ ಎಲ್ಲರನ್ನೂ "ರಂಗನಾಥನ ನೋಡುವ ಬನ್ನಿ" ಎಂದು ಕರೆಯುತ್ತಾರೆ ಈ ಕೃತಿಗಳನ್ನು ಓದಿದಾಗ ಆಗುವ ಆನಂದ ಅದನ್ನು ವಿವರಿಸಿದರೆ ಹೇಗೆ ಉಂಟಾಗುವುದು ! ಈ ಎಲ್ಲ ಕೃತಿಗಳಲ್ಲಿಯೂ ಪರಮಾತ್ಮನ ದಶಾವತಾರ ಲೀಲೆಗಳನ್ನೂ, ಅವನ ಶಕ್ತಿಯನ್ನೂ ಬೆರಗಾಗುವಂತೆ ರಾಜರು ಚಿತ್ರಿಸಿದ್ದಾರೆ

## ಭ್ರಮರ ಗೀತೆ

ಶ್ರೀಪಾದರಾಜರ ಕೃತಿಗಳಲ್ಲಿ 'ಭ್ರಮರ ಗೀತೆ' ತುಂಬ ಪ್ರಸಿದ್ಧವಾಗಿದೆ ಭಾಗವತದಲ್ಲಿ ಬರುವ ಪ್ರಸಂಗವೊಂದು ಇದಕ್ಕೆ ಮೂಲವಾಗಿದ್ದರೂ ಇದೊಂದು ಸ್ವತಂತ್ರ ಭಾವಗೀತೆಯಾಗಿದೆ 'ಭ್ರಮರ' ಎಂದರೆ ದುಂಬಿ ಎಂದರ್ಥ ಗೋಕುಲದ ಗೋಪಿಯರು ಶ್ರೀಕೃಷ್ಣನ ಅಗಲಿಕೆಯಿಂದ ವ್ಯಥೆ ಪಡುತ್ತಿದ್ದರು ಆಗ ದುಂಬಿಯೊಂದು ಝೇಂಕರಿಸುತ್ತಾ ಅವರಲ್ಲಿಗೆ ಬಂದಿತು ಅದನ್ನು ಕಂಡ ಗೋಪಿಯರು ದುಂಬಿಯನ್ನು ಸಂಬೋಧಿಸುತ್ತಾ ತಮ್ಮ ದುಃಖವನ್ನು ತೋಡಿ ಕೊಂಡರು ಆದುದರಿಂದ ಇದನ್ನು 'ಭ್ರಮರಗೀತೆ' ಎನ್ನುತ್ತಾರೆ

ದುಂಬಿ ಹೂಗಳಲ್ಲಿನ ಮಕರಂದವನ್ನು ಹೀರಿ ಹಾರುವುದರಿಂದ ಅದು ಸುಳಿದಲ್ಲಿ ಸುವಾಸನೆ ಘಮಘಮಿಸುತ್ತದೆ, ಶ್ರೀಕೃಷ್ಣನ ಬಳಿಯಿಂದ ಆ ದುಂಬಿ ಬಂದಿತೆಂದು ಭಾವಿಸಿದ ಗೋಪಿಯರು ಕೃಷ್ಣನ ಲಲನೆಯರ ಗಂಧ ಲೇಪನದ ಸುವಾಸನೆಯನ್ನು ತಂದಿತೆಂದು ಭಾವಿಸಿ ಕೋಪಗೊಂಡು ತಮ್ಮನ್ನು ಮುಟ್ಟಬಾರದೆಂದು ಅವರು ದುರುಗುಟ್ಟುತ್ತಾರೆ ತಮ್ಮ ಚಿತ್ತವನ್ನು ಅಪಹರಿಸಿದ ಕೃಷ್ಣ ತಮ್ಮನ್ನು ವಿರಹ ಸಮುದ್ರದ ನಡುವೆ ಬಿಟ್ಟು ನಿರ್ದಯನಾಗಿ ತೊರೆದಿರುವನೆಂದು ದೂರುತ್ತಾರೆ ಅವನು ಲಕ್ಷ್ಮೀರಮಣ, ತಾವು ಗೊಲ್ಲತಿಯರು, ಮೋಕ್ಷದರಸನು ಅವನು, ಗೋಕ್ಷೀರಗಳಿಂದ ತಾವು ತೃಪ್ತರು, ಎಂದು ಕೃಷ್ಣನಿಗೂ ತಮಗೂ ಇರುವ ಅಂತರವನ್ನು ಲೆಕ್ಕ ಹಾಕಿಕೊಂಡು ಅವನು ತಮ್ಮ ಕೈಗೆ ಸಿಗಲಾರನೆಂದು ನಿರ್ಧರಿಸಿ "ಭಕ್ತ ಬಂಧು ಶ್ರೀಕೃಷ್ಣ ತಮ್ಮ ಹೃದಯ ಮಂದಿರದೊಳು ಎಂದೆಂದೂ ಇರಬೇಕೆ"ಂದು ತಿಳಿಸುವಂತೆ ಅವರು ದುಂಬಿಯನ್ನು ಪ್ರಾರ್ಥಿಸುತ್ತಾರೆ ಕೃಷ್ಣನೊಂದಿಗೆ ಕೆಲಕಾಲ ಕಳೆಯುವ ಸುಯೋಗ ತಮಗೆ ದೊರಕಿದುದಕ್ಕೆ ಆನಂದಿಸಿ ಆಗ ತಾವು ಮಾಡಿರಬಹುದಾದ ತಪ್ಪುಗಳನ್ನು ಕ್ಷಮಿಸಬೇಕೆಂದು ಯಾಚಿಸುವ ಗೋಪಿಯರ ಮಾತುಗಳಲ್ಲಿ ಭಕ್ತರು ಪರಮಾತ್ಮನನ್ನು ಕುರಿತು ಹೇಗೆ ಪ್ರಾರ್ಥಿಸುವರೆಂಬುದನ್ನು ಶ್ರೀಪಾದರಾಜರು ಚಿತ್ರಿಸಿದ್ದಾರೆ ಈ ರೀತಿಯ ಭಕ್ತಿ ಭಾವ ಪ್ರಕಟನೆಗೆ ಸಾಹಿತ್ಯದಲ್ಲಿ 'ಮಧುರ ಭಕ್ತಿಭಾವ' ವೆನ್ನುತ್ತಾರೆ ಇಂತಹ ಇನ್ನೂ ಅನೇಕ ಕೃತಿಗಳನ್ನು ಶ್ರೀಪಾದರಾಜರು ರಚಿಸಿದ್ದಾರೆ

## ತತ್ತ್ವಬೋಧೆ

ಭಗವಂತನನ್ನು ಕುರಿತು ಪ್ರಾರ್ಥಿಸುವ ಎಲ್ಲ ಭಕ್ತರ ವಾಣಿಯಲ್ಲಿಯೂ ಒಂದು ತತ್ತ್ವ ಅಡಗಿರುತ್ತದೆ ಭಕ್ತನಿಗೂ ಭಗವಂತನಿಗೂ ಇರುವ ಸಂಬಂಧ, ದೇವರ ಶಕ್ತಿ-ಸಾಮರ್ಥ್ಯ, ಭಗವಂತನ ಕೃಪೆಯಾದ ಮೇಲೆ ಭಕ್ತನಿಗೆ ದೊರೆಯುವ ಸುಖದ ಸ್ವರೂಪ – ಇತ್ಯಾದಿಗಳನ್ನು ಕುರಿತು ಭಕ್ತರು ಕೆಲವು ವಿಚಾರಗಳನ್ನು ಹೇಳಿರುತ್ತಾರೆ ಜಗತ್ತಿನಲ್ಲಿ ಅನೇಕ ಸಿದ್ಧಾಂತಗಳುಂಟು, ಆದರೆ ಭಕ್ತರು ತಾವು ನಂಬಿದ ಸಿದ್ಧಾಂತದ ತತ್ತ್ವಗಳಿಗನುಗುಣವಾಗಿ ಭಗವಂತನ ವಿಚಾರಗಳನ್ನು ತಮ್ಮ ಕೃತಿಗಳಲ್ಲಿ ತಿಳಿಸುತ್ತಾರೆ

ಶ್ರೀಪಾದರಾಜರು ಮಧ್ವ ತತ್ತ್ವವನ್ನು ಒಪ್ಪಿಕೊಂಡಿದ್ದರು ಕ್ರಿ ಶ ಹದಿಮೂರನೆಯ ಶತಮಾನದಲ್ಲಿ ಶ್ರೀ ಮಧ್ವಾಚಾರ್ಯರು ಪ್ರತಿಪಾದಿಸಿ – ಪ್ರತಿಷ್ಠಾಪಿಸಿದ ದ್ವೈತ ತತ್ತ್ವ 'ಮಧ್ವತತ್ತ್ವ' ವೆಂದೇ ಪ್ರಸಿದ್ಧಿಯಾಗಿದೆ ವಿಷ್ಣು ಎಲ್ಲ ದೇವತೆ

( 29ನೇ ಪುಟ ನೋಡಿ )

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ

ಪ್ರತಿ ಮಂಗಳವಾರದಲ್ಲಿ ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ, ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದಗಳೊಡನೆ ಆಲಯ ಪ್ರವೇಶ ಮಾಡುತ್ತಾರ

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಲ ಮೇಲಿದ್ದು ನೋಡಬಹುದು ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ

ತಿರುಮಲೆ ತಿರುಪತಿ ದೇವಸ್ಥಾನ.

# ಮುಳಬಾಗಿಲಿನ ಬೆಳಕಿನ ಕಿರಣ

ನಮಃ ಶ್ರೀಪಾದರಾಜಾಯ
ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯಾಯ
ವಿಜಯಾರ್ಯಾಯ ತೇ ನಮಃ ॥

ಶ್ರೀಪಾದರಾಜರನ್ನು ದಾಸಸಾಹಿತ್ಯದ ಪಿತಾಮಹರೆಂದು ಗುರುತಿಸಲಾಗಿದೆ. ತಾಯಿಭಾಷೆಯಾದ ಕನ್ನಡದಲ್ಲಿ ಕೀರ್ತನೆಗಳನ್ನು ಇವರು ರಚಿಸಿದವರಾಗಿದ್ದಾರೆ. ಈ ಮೂಲಕವಾಗಿ ಕನ್ನಡ ದೇಶ–ಭಾಷೆಗಳು ಸಂಗೀತಸಾಮ್ರಾಜ್ಯದಲ್ಲಿ ನರ್ತಿಸಲು ಕಾರಣಪುರುಷರಾಗಿದ್ದಾರೆ ಇಂತಹ ಯೋಗಿವರೇಣ್ಯರ ಗುರುಸಾರ್ವಭೌಮರ ವೃಂದಾವನವು ಕರ್ನಾಟಕ ರಾಜ್ಯದ ಕೋಲಾರ ಜಿಲ್ಲೆಯಲ್ಲಿ, ವಿಜಯನಗರ ಸಾಮ್ರಾಜ್ಯದ 'ಮೂಡಣದ ಬಾಗಿಲಿ'ನಲ್ಲಿದೆ.

ಮುಳಬಾಗಿಲು ಅನೇಕ ಗುಡಿ–ಗೋಪುರಗಳಿಂದಲೂ, ವೃಂದಾವನ – ಮಠಗಳಿಂದಲೂ, ತುಂಬಿ ಶೈವ–ವೈಷ್ಣವ ಧರ್ಮಗಳ ಆವಾಸವಾಗಿ ಪ್ರಸಿದ್ಧಿ ಹೊಂದಿದೆ. ವೈದಿಕ ಧರ್ಮದ ಹೊಳೆ ಇಲ್ಲಿ ವಿಶೇಷವಾಗಿ ಹರಿಯುತ್ತಿದೆ. ಈ ಹೊಳೆಯ ಪಾತ್ರದಂತೆ ಕಂಡುಬರುವ 'ಅಗ್ರಹಾರ'ವು ಇಲ್ಲಿದೆ. ಇಲ್ಲಿನ ಜನಜೀವನ ಹಾಗೂ ನಾಗರಿಕತೆಗಳಲ್ಲಿ ವೈದಿಕತೆಯು ಅಡಗಿ ಕುಳಿತಿದೆ. ಇದೊಂದು ರೀತಿ ಸಂಪುಟದಲ್ಲಿಟ್ಟಂತೆ ರಕ್ಷಿತವಾಗಿದೆ. ಈ ಬೆಳವಣಿಗೆಯು ಒಮ್ಮೆಂದೊಮ್ಮೆಗೆ ಉಂಟಾದದ್ದಲ್ಲ. ಈ ಕ್ಷೇತ್ರಕ್ಕೆ ದೊರೆತಿರುವ ಕ್ಷಾತ್ರ ಹಾಗೂ ಧಾರ್ಮಿಕ ತೇಜಸ್ಸುಗಳು ಕ್ರಮೇಣ ದೊರೆತಿರುವುದಾಗಿವೆ. ಧಾರ್ಮಿಕ ತೇಜಸ್ಸಿನ ಇಂದಿನ ಪ್ರಜ್ವಲತೆಗೆ ಸುಮಾರು 500 ವರ್ಷಗಳ ಹಿಂದೆ ಮೂಡಿಬಂದ 'ಬೆಳಕಿನ ಕಿರಣ'ವೊಂದು ಕಾರಣವಾಗಿದೆ. ಬೆಂಗಳೂರು ಜಿಲ್ಲೆಯ ಚೆನ್ನಪಟ್ಟಣದ ಹತ್ತಿರವಿರುವ ಅಬ್ಬೂರಿನ ಪ್ರಕೃತಿಯ ಉಷಾದೇವಿಯ ಮಡಿಲಿನಿಂದ ಈ ಕಿರಣವು ಮೂಡಿ ಬಂದಿದೆ. ಶ್ರೀರಂಗ, ತಿರುಪತಿ–ಮುಂತಾದ ಕಡೆಗಳಿಗೂ ಹಬ್ಬಿದ ಈ ಜ್ಯೋತಿಯು ನೃಸಿಂಹ ತೀರ್ಥದ 'ನೃಸಿಂಹವನ'ದಲ್ಲಿ ಶ್ರೀಪಾದರಾಜಯತಿಯಾಗಿ ಪ್ರಖರವಾಗಿ ಬೆಳಗಿದೆ.

'ನೃಸಿಂಹ ತೀರ್ಥ'ವು ಬಹಳ ಹಿಂದಿನಿಂದಲೂ ಇದ್ದ ಪ್ರಾಕೃತಿಕ ಪುಣ್ಯಭೂಮಿ. ಅಕ್ಷೋಭ್ಯ ತೀರ್ಥರು ಮಾಧ್ವಮತದ ತಳಹದಿಗೆ ಈ ಪ್ರದೇಶವನ್ನೂ ಬಳಸಿಕೊಂಡರು. ಅಂಗಾರದಿಂದ ಇಲ್ಲೊಬ್ಬ ನರಸಿಂಹನನ್ನು ಬರೆದು, ಉದ್ಭವಿಸುವಂತೆ ಮಾಡಿದರು. ಇಂದಿಗೂ ಈ ನರಸಿಂಹ ಇಲ್ಲಿ ಪೂಜೆಗೊಳ್ಳುತ್ತಿದ್ದಾನೆ ಯೋಗನರಸಿಂಹನೆಂದು ಪ್ರಖ್ಯಾತನಾಗಿರುವ ಈ ಮೂರ್ತಿಯು ಯೋಗಪಟ್ಟಿಯಿಂದಾವೃತನಾಗಿ, 'ಉತ್ಕುಟಾಸನ'ದಲ್ಲಿ ವಿರಾಜಮಾನನಾಗಿದ್ದಾನೆ ವಿಷ್ಣುವಿನ ಅವತಾರವಾದ ನಾರಸಿಂಹನ ಮೂರ್ತಿ ಕಲ್ಪನೆಯು ಬೆಟ್ಟವೊಂದರ ಗುಹೆಯಿಂದ ಎದ್ದು ಬರುವ ಸಿಂಹದಂತೆ ಕಾಣುತ್ತದೆ. ಇಲ್ಲಿನ ನಾರಸಿಂಹ ಸಹಾ ಇದೇ ರೂಪದಲ್ಲಿದ್ದಾನೆ ಶ್ರೀಪಾದರಾಜರು ಶ್ರೀರಂಗದಲ್ಲಿ ತಮ್ಮ ಗುರುಗಳಾದ ಸ್ವರ್ಣವರ್ಣತೀರ್ಥರು ವೃಂದಾವನಸ್ಥರಾದ ಬಳಿಕ ಈ ಕ್ಷೇತ್ರಕ್ಕೆ ಬಂದರು. ನರಸಿಂಹದೇವರಲ್ಲಿ ರಾಜರಿಗೆ ವಿಶೇಷವಾದ ಭಕ್ತಿಭಾವವುಂಟಾಗಿ ಇಲ್ಲಿಯೇ ನೆಲಸಿದರು ಬಹುಶಃ ಅವರ ಪೂರ್ವಾಶ್ರಮದ ಯಾವುದೋ ಒಂದು ಶಕ್ತಿ

**ಶ್ರೀ ಕು. ರ. ನರಸಿಂಹನ್,** ಎಂ.ಎ.

ಅವರನ್ನು ಇಲ್ಲಿಯೇ ನೆಲೆಯೂರುವಂತೆ ಮಾಡಿರಬಹುದು. ತಾಯಿನಾಡಿನಲ್ಲಿ ಉಳಿದು ತಾಯಿಭಾಷೆಯ ಮೂಲಕ ತಾಯ್ನಾಡಿನ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವ ಹಂಬಲವೂ ಸಹಾ ಇದರೊಟ್ಟಿಗೆ ಕೂಡಿರಬೇಕು.

ಮುಳಬಾಗಿಲಿನ ಪ್ರದೇಶವು ರಾಜಕೀಯವಾಗಿ ಪ್ರಸಿದ್ಧವಾದ ಪ್ರಾಂತವಾಗಿದ್ದು, ವಿಜಯನಗರದ ಅರಸರ ಕಾಲದಲ್ಲಂತೂ ಇದರ ಬೆಳವಣಿಗೆ ಎತ್ತರವನ್ನು ತಲುಪಿತ್ತು. ಈ ಅರಸರು ಧರ್ಮಸಹಿಷ್ಣುಗಳು, ಕಲಾರಾಧಕರೂ ಆಗಿದ್ದರು. ನೃತ್ಯ ಸಂಗೀತಗಳು ಸಹಾ ಇವರ ಕಾಲದಲ್ಲಿ ಸಾಕಷ್ಟು ಪುಷ್ಟಿಹೊಂದಿ ಬೆಳೆದವು. ಶೈವ-ವೈಷ್ಣವ ಧರ್ಮಗಳೆರಡಕ್ಕೂ ಸಮಾನವಾದ ಪ್ರೋತ್ಸಾಹ ನೀಡಿ ಅದನ್ನು ವೃದ್ಧಿಗೊಳಿಸುವಲ್ಲಿ ಇವರು ಪರಿಶ್ರಮಪಟ್ಟರು. ಇವರ ಕಾಲದಲ್ಲಿ ಮುಳ-ಬಾಗಿಲಿನಲ್ಲಿ ಕೆಲವಾರು ಮಠಗಳು ಪ್ರಸಿದ್ಧವಾಗಿದ್ದವು.

ಆದರೂ ಇಂತಹವರ ರಾಜ್ಯದಲ್ಲಿ ಧರ್ಮಾಂಧರಿಗೆ ಕಡಿಮೆಯಿರಲಿಲ್ಲ. ಇದರಿಂದಾಗಿ ಆಗಾಗ ವಾದ–ವಿವಾದಗಳೂ, ಘರ್ಷಣೆಗಳೂ ನಡೆಯುತ್ತಲೇ ಇದ್ದವು. ಫಲಿತಾಂಶವಾಗಿ ಗಟ್ಟಿ ನೆಲದ ಮೇಲೆ ಸತ್ವಯುತವಾಗಿ ಉಳಿಯಬಲ್ಲ ಮತ ಪಂಥಗಳು ಮಾತ್ರ ಬದುಕಿದವು.



ವ್ಯಾಸರಾಯರು ಸ್ಥಾಪಿಸಿದ
ಶ್ರೀ ವೇಣುಗೋಪಾಲಮೂರ್ತಿ
ಚಿತ್ರ ; ಸೋಮಶೇಖರ್.

ಶ್ರೀಪಾದರಾಜರ ಆಗಮನಕ್ಕೆ ಮುಂಚೆ ಮುಳಬಾಗಿಲು ಪ್ರಾಂತದಲ್ಲಿಯೂ ಇಂತಹ ವಿಷ ಮಿಶ್ರಿತ ಗಾಳಿ ಬೀಸಿರುವುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಪ್ರೌಢದೇವರಾಯ ( ಕಾಲ 15 ನೇ ಶತಕದ ಆರಂಭ )ನ ಕಾಲದಲ್ಲಿ ಬಾಳಿಬದುಕಿದ ವೀರಶೈವ ವಿರಕ್ತರಲ್ಲಿ ಲಕ್ಕಣ ದಂಡೇಶನೆಂಬುವನೂ ಒಬ್ಬನಿದ್ದ. ಈತ ವಿರೂಪಾಕ್ಷೇಶ್ವರ ದೇವಾಲಯದ ನಿರ್ಮಿತಿಗೆ ಕಾರಣನಾದ. ಇದಕ್ಕೂ ಮುಂಚೆ ಇಲ್ಲಿ ಹೊಯ್ಸಳರ ಕಲೆ–ಶಿಲ್ಪಗಳನ್ನೊಳಗೊಂಡ ಗುಡಿ–ಗೋಪುರಗಳಿದ್ದಿರಬೇಕು. ಆದರೆ ಪ್ರೌಢದೇವರಾಯನ ಕಾಲದಲ್ಲಾದ ದೊಂಬಿ-ಘರ್ಷಣೆಗಳಿಂದ ಈ ಅಪಾರವಾದ ಕಲೆ–ಸಂಪತ್ತಿನ ಹಾನಿಯಾಗಿರಬೇಕು. ಶ್ರೀಪಾದರಾಜರು ಮುಳಬಾಗಿಲಿಗೆ

ಆಗಮಿಸಿದ ನಂತರ ನಿರಂತರವಾಗಿ ಹರಿದು ಹೋಗುತ್ತಿದ್ದ ಈ ಧರ್ಮ-ಕಲೆಗಳ ಪ್ರವಾಹಕ್ಕೆ 'ವೈದಿಕಧರ್ಮ'ದ ಒಡ್ಡನ್ನು ಹಾಕಿ ತಡೆಗಟ್ಟುವ ಸಾಹಸವನ್ನು ಮಾಡಿದರು. ಸಾರ್ವಜನಿಕರ ದಾಗಿದ್ದ ಸಂಪತ್ತು ಈ ಉದ್ಧಾರಕರ ಕೈಸೇರಿತು ಇಂತಹದೊಂದು ಹಿನ್ನೆಲೆಯಲ್ಲಿ ರಾಜರು ರಾಯರಾಗಿಯೂ ಸಹಾ ಮೆರೆದು ಕೆಲವಾರು ಪವಾಡಗಳನ್ನು ತೋರಿಸಿ ಸಮಾಜದ ಭದ್ರತೆಗೆ 'ಧಾರ್ಮಿಕ ನಾಂದಿ' ಯನ್ನು ಹಾಡಿರಬೇಕೆಂದೆನಿಸುವುದು. ತಮ್ಮ ಬಾಲ್ಯದ ಚುರುಕು, ಪ್ರೌಢವಾದ ವಿದ್ಯಾಭ್ಯಾಸಗಳು ಇವರ ಈ ಕಾರ್ಯಕ್ಕೆ ಉತ್ತೇಜನವಾಗಿರಬೇಕು

ಶ್ರೀಪಾದರಾಜರಲ್ಲಿ ರಾಜಕೀಯ ಮುತ್ಸದ್ದಿತನವೂ ನೇರಿತ್ತು. ಸಾಳ್ವನರಸಿಂಹನ ಸಿಂಹಾಸನವನ್ನು ಅಲಂಕರಿಸಿದ್ದು ಇದಕ್ಕೊಂದು ನಿದರ್ಶನ. ರಾಜನ ಕೈಯಲ್ಲಿ ಸುವರ್ಣಾಭಿಷೇಕ ಮಾಡಿಸಿಕೊಂಡ ಹಿರಿಮೆ ಅವರದಾಗಿದೆ. ಇಂತಹವರ ಶಿಷ್ಯ ಪರಂಪರೆ ಗೌರವಾನ್ವಿತವಾದದ್ದು ಹಾಗೂ ಪ್ರೌಢಿಮೆಯನ್ನುಳ್ಳದ್ದಾಗಿದೆ ಇಂತಹ ಶಿಷ್ಯರಲ್ಲಿ ವ್ಯಾಸರಾಯರು ಪ್ರಮುಖರಾದವರು. ಗುರುಗಳಿಗೇ ದೊರೆಯದ 'ಅಪೂರ್ವದರ್ಶನ' ಈ ಶಿಷ್ಯನಿಗೆ ದೊರೆತಿತ್ತಂತೆ. ವೇಣುಗೋಪಾಲನ ನಿಜರೂಪವನ್ನು, ಕೊಳಲ ದನಿ ಹಾಗೂ ನೃತ್ಯದ ಸೊಬಗನ್ನು ವ್ಯಾಸರಾಯರು ಪ್ರತ್ಯಕ್ಷವಾಗಿ ಕಂಡು ಮೈಮರೆತಿದ್ದರೆ, ಗುರುಗಳಾದ ಶ್ರೀಪಾದರಾಜರು ಅದನ್ನು ರಹಸ್ಯದಲ್ಲಿ ಕಂಡು ಆನಂದತುಂದಿಲರಾದರು. ಬಹುಶಃ ಇಂತಹ ಘಟನೆಯ ಐತಿಹಾಸಿಕ ಸ್ಮರಣೆಗಾಗಿಯೇ ಏನೋ ವ್ಯಾಸರಾಯರ ಮಠದಲ್ಲಿ ಅವರೇ ಸ್ಥಾಪಿಸಿದರೆಂದು ಹೇಳಲಾದ ವೇಣುಗೋಪಾಲನ ವಿಗ್ರಹವಿದೆ. ರಾಯರು ವರ್ಣಿಸಿರುವ ವೇಣುಗೋಪಾಲನ ವಿಲಾಸ-ವಿಭ್ರಮಗಳು ಈ ಹೊಯ್ಸಳರ ಕಾಲದ ವಿಗ್ರಹದಲ್ಲಡಗಿದೆ.

ಶಿಷ್ಯ ವೇಣುಗೋಪಾಲನ ಆರಾಧಕನಾಗಿದ್ದರೆ, ಗುರುಗಳಾದ ಶ್ರೀಪಾದರಾಯರು ಲಕ್ಷ್ಮೀನಾರಾಯಣನ ಆರಾಧಕರಾಗಿದ್ದಾರೆ ಇದಕ್ಕೆ ಕಾರಣವು ಅವರ ಪೂರ್ವಾಶ್ರಮದ ಪದ್ಧತಿಯಲ್ಲೇ ಅಡಗಿರಬೇಕೆಂದು ಭಾಸವಾಗುತ್ತದೆ. ಮುಳಬಾಗಿಲಿನ ಮಠದಲ್ಲಿರುವ ಸುಂದರವಾದ ಲಕ್ಷ್ಮೀನಾರಾಯಣನ ವಿಗ್ರಹವು ಈ ಸಂಗತಿಗೊಂದು ಐತಿಹಾಸಿಕ ಮೆರುಗನ್ನು ನೀಡುತ್ತದೆ. ಇವರ ಅಂಕಿತ 'ರಂಗವಿಠಲ' ಕನ್ನಡ-ಸಂಸ್ಕೃತಗಳಲ್ಲಿ ಸಾಹಿತ್ಯರಚನೆ ಮಾಡಿ ಪ್ರಸಿದ್ಧರಾದವರು ಶ್ರೀಪಾದರಾಜರಾಗಿದ್ದಾರೆ.

ಶ್ರೀಪಾದರಾಯರಲ್ಲಿ ಹಿಂದಿನ ಆಚಾರ್ಯ ಪುರುಷರಲ್ಲಿ ಯಾರಲ್ಲಿಯೂ ಕಾಣದ ದಟ್ಟವಾದ ಪ್ರಾದೇಶಿಕ ಭಾಷೆಯ ಒಲವು ತುಂಬಿಕೊಂಡಿದೆ. ಸಂಸ್ಕೃತ ದೇವಭಾಷೆ, ಉನ್ನತಭಾಷೆ. ಮುಳಬಾಗಿಲು ಒಂದು ಉನ್ನತ ವಿದ್ಯಾಭ್ಯಾಸ ಕೇಂದ್ರ. ಇಷ್ಟೆಲ್ಲ ಇದ್ದರೂ ಸಹಾ ಕನ್ನಡದಂಥ ಸರಳ ಸುಂದರ ಭಾಷೆಯಲ್ಲಿ ಭಕ್ತಿಯ ಹೊನಲನ್ನು ಶ್ರೀಪಾದರಾಜರು ತಮ್ಮ ರಚನೆಗಳಲ್ಲಿ ಹರಿಸಿದ್ದಾರೆ. ರಾಜಮನೆತನದ ವಿಲಾಸ-ವೈಭವಗಳು ಅವರ ಕೀರ್ತನೆಗಳಲ್ಲಿ ಗೆಜ್ಜೆ ಕಟ್ಟಿಕೊಂಡು ಕುಣಿಯುವ ಬಸಿಯನ್ನು ಹೊಂದಿದೆ ಹೀಗೆ ಶ್ರೀಪಾದರಾಜರು ಮಡುಗಟ್ಟಿ ನಿಂತುಹೋಗಿದ್ದ 'ಧಾರ್ಮಿಕ ಹೊಳೆಯ' ಕಸವನ್ನು ತೆಗೆದು ಅದರ ಗತಿಯನ್ನು ಸರಾಗಗೊಳಿಸಿದವರಾಗಿದ್ದಾರೆ. ಆಚಾರ್ಯ ಪುರುಷರಲ್ಲಿರಬೇಕಾದ ತಪಸ್ಸಾಧನೆಯ ಜೊತೆಗೆ ರಾಜರಲ್ಲಿ ತುಂಬಿ ತುಳುಕುವ ವೈಭವವೂ ಸೇರಿ ವೈದಿಕ ಸಾಹಿತ್ಯಕ್ಕೊಂದು ಕ್ರಾಂತಿಕಾರಕ ತಿರುವನ್ನು ದೊರಕಿಸಿಕೊಟ್ಟವರಾಗಿದ್ದಾರೆ. ಇಂಥವರನ್ನು ಧರ್ಮಪೀಠಾಧಿಕಾರಿಗಳನ್ನಾಗಿ ಮಾತ್ರವಲ್ಲದೆ ಸಾಮಾಜಿಕ ಕಳಕಳಿಯ ಪಾತಳಿಯೆಂದು ಗುರುತಿಸುವುದು ಯೋಗ್ಯವಾದೀತು

---



# ನಾನೇನು ಬೇಡಲಿ

ನಾನೇನು ಬೇಡಲಿ ನಿನ್ನ
ಎಲ್ಲಾ ಬಲ್ಲ ನಿನ್ನಲ್ಲಿ ಬಂದು

ಮನುಷ್ಯಾತೀತಾದ್ಭುತಮೇಧಾ ಸಂಪನ್ನ
ಮುಳಬಾಗಿಲ ದೊರೆ ಶ್ರೀಪಾದರಾಜ
ಗುರುವ್ಯಾಸರಾಯರನು ಕರುಣಿಸಿದ ನಿನ್ನಲ್ಲಿ
ಶರಣಾಗುವುದಲ್ಲದೆ ಮತ್ತೇನು ಬೇಡಲಿ ನಾನು

ಧಿಮಿಧಿಮಿಕೆನಿಸುತ ಕಾಲಿನಗೆಜ್ಜೆ
ಹಾಡುತ ಕುಣಿಯುತ 'ಅವನನು' ಒಲಿಸಿದ
ಕನ್ನಡದ ಮೊದಲ ಯತಿ ಶ್ರೀಪಾದರಾಜ
ನಾನೇನು ಬೇಡಲಿ ನಿನ್ನಲ್ಲಿ ಬಂದು

'ಸದಾ ನನ್ನ ಹೃದಯದಲಿ ನಿಂದು
ನಿನ್ನ ನೆನೆವಂತ ಮತಿಕೊಡು' ಎಂದು
ಕೇಳುವ ಈ ತೊದಲು ನುಡಿಗಿಂತ
ಮತ್ತೇನು ಬೇಡಲಿ ನಾನು

ಅಚಿಂತ್ಯಮಹಿಮ, ಭಕ್ತಾನುಕಂಪ,
ಕಾಮಧೇನು,
ಮುಳಬಾಗಿಲ ದೊರೆ ಶ್ರೀಪಾದರಾಜ
ಮತ್ತೇನು ಬೇಡಲಿ
ನನ್ನಂತರಂಗವ ಬಲ್ಲ ನಿನ್ನಲ್ಲಿ ಬಂದು ನಿಂದು

— ಅವಿನಾಶಿ

# ಶ್ರೀಪಾದರಾಜರು ಕಂಡ

# ಶ್ರೀ ಕೃಷ್ಣ

ದಾಸಸಾಹಿತ್ಯದ ಬಗ್ಗೆ ಉಲ್ಲೇಖವಾಗಿರುವ ದಾಖಲೆಗಳಂತೆ ಕ್ರಿ. ಶ. 879 ರಿಂದ ಕ್ರಿ. ಶ. 1205ರವರೆಗೆ ಅದು ರಾಹುಬಡಿದ ಚಂದ್ರನಂತೆ ಸ್ಥಗಿತವಾಗಿತ್ತು. ಮಾಧ್ವ ಮಠಾಧಿಪತಿಗಳು ದ್ವೈತ ಸಿದ್ಧಾಂತ ಪ್ರಚಾರಕ್ಕೆ ದಾಸಸಾಹಿತ್ಯವನ್ನು ಮಾಧ್ಯಮವಾಗಿಸಿಕೊಂಡರು. ಕ್ರಿ.ಶ 1406 ರಲ್ಲಿ ಯತಿಪುಂಗವ ಶ್ರೀಪಾದರಾಜರು ದಾಸ ಸಾಹಿತ್ಯವನ್ನು ತನ್ನದೇ ಆದ ರೂಪರೇಷೆ ಪಡೆಯುವಂತೆ ಮಾಡಿ ಭದ್ರವಾದ ಬುನಾದಿಯೊಡನೆ ಮುಂದುವರಿಸಿದರು. ಇಂದಿಗೆ ನಾವು ಆಚರಿಸುವ ಶ್ರೀಪಾದರಾಜರ ಐದನೇ ಶತಮಾನೋತ್ಸವ, ದಾಸಸಾಹಿತ್ಯಕ್ಕೆ ಸಲ್ಲಿಸುವ ಗೌರವ. ಅಂದು ಧರ್ಮೋಪದೇಶಕ್ಕೆ ಸಂಸ್ಕೃತವನ್ನು ಬಿಟ್ಟು ಅನ್ಯ ಭಾಷೆಗಳನ್ನು ಬಳಸುವುದು ಪದ್ಧತಿಯಲ್ಲಿರಲಿಲ್ಲ. ಆದರೆ ಜನಸಾಮಾನ್ಯರನ್ನು, ಪಂಡಿತರನ್ನು ಪುನೀತಗೊಳಿಸುವ ವಿಶಾಲ ದೃಷ್ಟಿಯಿಂದ, ಕ್ರಾಂತಿಕಾರಿಯಾದ ಆಧ್ಯಾತ್ಮಿಕ ಚೇತನ ಶ್ರೀಪಾದರಾಜರಲ್ಲಿ ಪ್ರಜ್ವಲಿಸುತ್ತಿದ್ದುದರಿಂದ, ಅವರು ದಾಸ ಸಾಹಿತ್ಯವನ್ನು ಪುನರಾರಂಭಿಸಿದರು. ದಾಸ ಸಾಹಿತ್ಯದಲ್ಲಿ ಪೂರ್ಣಪ್ರಜ್ಞರಾದ ಜ್ಞಾನಜ್ಯೋತಿಯನ್ನು ಬೆಳಗುವಂತೆ ಮಾಡಲು ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ ಶ್ರೀಕೃಷ್ಣ ದರ್ಶನವನ್ನು ಅಪಾರವಾಗಿ ಮಾಡಿದ್ದಾರೆ.

ಒಮ್ಮೆ ಶ್ರೀಪಾದರು ಪಂಢರಪುರವನ್ನು ಸಂದರ್ಶಿಸಿದಾಗ, ತಮ್ಮ ಕನಸಿನಲ್ಲಿ ಸಂಭವಿಸಿದಂತೆ ಚಂದ್ರಭಾಗಾ ನದಿಯ ತೀರದಲ್ಲಿ ಮರಳನ್ನು ತೆಗೆಸಲು ಒಂದು ಚಿನ್ನದ ಪೆಟ್ಟಿಗೆ ದೊರಕಿತು. ಚಂದ್ರಭಾಗೆಯಲ್ಲಿ ಮಿಂದು ಪೆಟ್ಟಿಗೆಯನ್ನು ತೆರೆದಾಗ ಅಲ್ಲಿ ರಂಗವಿಠಲನ ಪ್ರತಿಮೆಯ ದರ್ಶನವಾಯಿತು. "ಶ್ರೀರಂಗ ವಿಠಲನ ಶ್ರೀಮುಕುಟಕೆ ಶರಣು" ಎಂದು ನಮಸ್ಕರಿಸಿ ಅಂದಿನಿಂದ "ರಂಗ ವಿಠಲ" ಎಂಬ ಅಂಕಿತದಿಂದ ಕೃತಿ ರಚನೆಗಿಳಿದರು.

ಶ್ರೀಪಾದರಾಜರಿಂದ ರಚಿತವಾದ ವೇಣು ಗೀತ, ಭ್ರಮರ ಗೀತಗಳಲ್ಲಿ ಶ್ರೀಕೃಷ್ಣನೊಡನೆ ಅವರು ಹೊಂದಿರುವ ಮಧುರ ಬಾಂಧವ್ಯದ ಚಿತ್ರಣ ರಮ್ಯವಾಗಿ ಆಗುತ್ತದೆ. ಕೃಷ್ಣನ ಬಾಲ್ಯವನ್ನು ವಿವರಿಸುವುದು ಇವರಿಗೆ ಅತಿಶಯವಾದ ಆನಂದ. ಭಾಗವತದ ದಶಮಸ್ಕಂಧವನ್ನೆಲ್ಲಾ ಧಾರಾಳವಾಗಿ ಬಳಸಿ ವಿಶಿಷ್ಟವಾದ ಸಮ್ಮೋಹನವನ್ನೆಸಗಿದ್ದಾರೆ. ಅಲ್ಲಲ್ಲಿ ರಾಮಾವತಾರದ ದೃಶ್ಯಗಳನ್ನು ಬೆರಸಿ ಆಧುನಿಕತೆಯ ಸಂಯೋಜನೆಯ ಕೌಶಲ್ಯವನ್ನು ತೋರಿದ್ದಾರೆ. ಕಂದ ಬಾಲಕೃಷ್ಣನನ್ನು ಕಂಡ ಗೋಪಿಕೆಯರ ಒಲವು ಬೆರೆತ ಅಲಿಕೆಯನ್ನೂ, ಅದೇ ರೀತಿಯಲ್ಲಿ ಯಶೋದೆಯ ಕಳವಳದ ಪುತ್ರ ವಾತ್ಸಲ್ಯವನ್ನೂ ತಮ್ಮದೇ ಆದ ಲಾಲಿತ್ಯದ ಭಗವಂತನ ಸಖ್ಯದ ಶೈಲಿಯಲ್ಲಿ ಹೊರಸೂಸಿದ್ದಾರೆ. ಮನೆಯಲ್ಲಿ ಒಂದು ಕ್ಷಣ ಕೃಷ್ಣ ಕಾಣದೆ ಹೋದರೆ ಅಷ್ಟದಿಕ್ಕುಗಳಲ್ಲಿ ಯಶೋದೆ ಶೋಧನೆ ನಡೆಸುವುದನ್ನು ತಮ್ಮ ಭಗವಂತನ ನಿಷ್ಕಳಂಕ ಪ್ರೇಮದಿಂದ ವರ್ಣಿಸಿರುವರು. ಒಮ್ಮೆ ಕೃಷ್ಣ ಆಟವಾಡಿ ಹಿಂತಿರುಗಿ ಬಂದಾಗ;

ಎಲ್ಲಾಡಿ ಬಂದ್ಯೋ ಎನ್ನ ರಂಗಯ್ಯಾ ನೀ
ಎಲ್ಲಾಡಿ ಬಂದ್ಯೋ ಎನ್ನ ಕಣ್ಣ
ಮುಂದಾಡದೆ

ಎಂದು ಹಂಬಲಿಸಿ, ಅವನ ಹಣೆ ಬೆವರಿಟ್ಟದ್ದನ್ನು ಹಾಗೂ ಬೆರಳಿನ ಉಂಗುರ ಕೊರಳ ಪದಕ ಮಾಯವಾಗಿರುವದನ್ನು ಕಂಡು

ಬೆರಳ ಉಂಗುರವೆಲ್ಲಿ ಹೋಗಿದೆ ನಿನ್ನ
ಕೊರಳ ಪದಕವೆಲ್ಲಿ ನೀಗಿದೆ
ಸರಕೆಲ್ಲ ಅವಳಲ್ಲಿ ಸಾಗಿದೆ ಆ
ತರುಣಿ ಮಹಿಮೆ ಹೀಂಗಾಗಿದೆ

ಎಂದು ಸಿಟ್ಟು ಮಾಡಿಕೊಳ್ಳುವಳು. ಪುನಃ ಅವನನ್ನು ಸಿಂಗರಿಸಿ ಆಭರಣಗಳಿಂದ ಅಲಂಕರಿಸಿ "ದೃಷ್ಟಿ ತಾಕೀತು ಬೀದಿ ಮುಟ್ಟ ಬ್ಯಾಡವೋ ಸೃಷ್ಟಿಯ ನಾರಿಯರೆಲ್ಲಾ ಕಣ್ಣಿಟ್ಟು ಹೀರುವರೋ ನಿನ್ನ" ಎಂದು ಬುದ್ಧಿ ಹೇಳುವಳು.

ಶ್ರೀಕೃಷ್ಣ ಆಟವಾಡಲು ಬಂದಾಗ ಗೋಪಿಕೆಯರಿಗೆ ನೀಡಿದ ಉಪಟಳ ಒಂದೇ ಎರಡೇ. ಹಲವು ಗಡಿಗೆಯ ಹಾಲನ್ನು ಕುಡಿದು, ಕಳ್ಳ ಹೆಜ್ಜೆಯಿಂದ ದೇವರಿಗಾಗಿ ಮೀಸಲಿಟ್ಟಿದ್ದ ಬೆಣ್ಣೆಯನ್ನು ಕದ್ದಿದ್ದ ಹಾಗೂ ಗೋಪಿಕೆಯರೊಡನೆ ಸರಸದ ಹುಯಿಲೆಬ್ಬಿಸಿದ್ದ. ಇದರಿಂದ ಅವರೆಲ್ಲಾ ಒಟ್ಟಿಗೆ ಬಂದು ಯಶೋದೆಯ ಮುಂದ "ನಿನ್ನ ಮಗನ ಲೀಲೆಯ ತಾಳಲಾರೆವು ನಾವು ತರಳನ ದುಡುಕು ಹೇಳಬಾರದೆ ಗೋಪಾಲ ಕೃಷ್ಣನಿಗೆ ಬುದ್ಧಿ ಅಮ್ಮ" ಎಂದು ದೂರು ಹೇಳುವರು. ಯಶೋದೆ ತನ್ನ ಸೆರಗಿನ ಮರೆಯಲ್ಲಿ ಅಡಗಿಕೊಂಡಿದ್ದ ಕೃಷ್ಣನನ್ನು ಕೋಪದಿಂದ ಪ್ರಶ್ನಿಸುವಳು. ಬೆದರಿದ ಹರಿಣಿಯಂತೆ ಶ್ರೀಕೃಷ್ಣ ತನ್ನ ಮುದ್ದು ಮಾತುಗಳಿಂದ ಅವರುಗಳು ಹೇಳಿದ ದೂರು ಅಸತ್ಯವೆಂದು ಸಮರ್ಥಿಸಿಕೊಳ್ಳುವನು.

ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ
ಸುದ್ದಿ ಪುಟ್ಟಿಸಿ
ಕಳ್ಳನೆಂದು ದೂರುತಾರೆ ಗೋಪಿ
ಎನ್ನ ಕೊಲ್ಲಬೇಕೆಂಬ ಬಗೆಯೆ
ಹರವಿಯ ಹಾಲು ಕುಡಿಯಲು
ಎನ್ನ ಹೊಟ್ಟೆ
ಕೆರೆಯೇನ ಹೇಳಮ್ಮಯ್ಯ
ಕರೆದು ಅಣ್ಣನ ಕೇಳಮ್ಮ ಉಂಟಾದರೆ
ಒರಳಿಗೆ ಕಟ್ಟಮ್ಮಯ್ಯ
ಮೊಸಲು ಬೆಣ್ಣೆಯನು ಮೆಲುವುದು
ಎನಗೆ ದೋಷವಲ್ಲವೇನಮ್ಮಯ್ಯ
ಆಸೆ ಮಾಡಿದರೆ ದೇವರು ಕಣ್ಣ ಮೋಸದಿ
ಕುಕ್ಕೋನಮ್ಮಯ್ಯ

ಶ್ರೀ ಜಿ. ಶ್ರೀಧರ್

ಪುಂಡುತನವ ಮಾಡಲು ನಾನು ದೊಡ್ಡ
ಗಂಡಸೇನೆ ಹೇಳಮ್ಮಯ್ಯ ಎನ್ನ
ಕಂಡವರು ದೂರುತಾರೆ ಗೋಪಮ್ಮ
ನಾ ನಿನ್ನ ಕಂದನಲ್ಲವೇನೆ ಅಮ್ಮಯ್ಯ
ಉಂಗುರದ ಕರದಿಂದ ಗೋಪಮ್ಮ ತನ್ನ
ಶೃಂಗಾರದ ಮಗನೆತ್ತಿ
ರಂಗ ವಿಠಲನ ಪಾಡಿ ಉಡುಪಿಯ
ಉತ್ತುಂಗ ಕೃಷ್ಣನ ತೂಗಿಸಲು

ಎಂದು ಕೃಷ್ಣನು ತನ್ನ ಬಾಲ ಪ್ರತಿಭೆಯನ್ನು ಪ್ರತಿಬಿಂಬಿಸುವುದನ್ನು ಶ್ರೀಪಾದರಾಜರು ಮನಮೋಹಕವಾಗಿ ರಚಿಸಿದ್ದಾರೆ. ದೂರು ಹೇಳಿದ ಗೋಪಿಕೆಯರಿಗೆ ಅವನ ಮಾತಿನಿಂದ ಮುಖಭಂಗವಾದರೂ ಅವನ ಮೇಲೆ ಅತಿಶಯವಾದ ಪ್ರೇಮ ಉಂಟಾಗುವುದು. ಮುರಳಿಯ ಸ್ವರಕ್ಕೆ ಮೋಹಿತರಾಗಿ, 'ಕರುಗಳನು ತಂದು ಕರದಿಂದಲೆತ್ತಿ ತೊಟ್ಟಿಲೊಳಗೆ ಇರಿಸುತ್ತ ಹಾಲ ಬೆರೆಸುತ್ತ ಮಜ್ಜಿಗೆ ಮೊಸರಿನೊಳಗೆ, ಪರಮಾತ್ಮನ ನೆನೆದು, ಬಿಸಿಲು ಚಳಿ ಮಳೆಯೊಳಗೆ ಹೊರಗೆ ಹೊರಟರಂತೆ,'– ಎಂದು ಗೋಪಿಕೆಯರನ್ನು ಶ್ರೀಪಾದರಾಜರು ಚಿತ್ರಿಸಿರುವರು. ಗೋಪಿಕೆಯರು ಅಂದಿನಿಂದ ಕೃಷ್ಣನಲ್ಲಿ ಅತಿಶಯವಾದ ಪ್ರೇಮವನ್ನು ಹೊಂದಿ ವಿರಹದಿಂದ ತತ್ತರಿಸಿದರು. ಕೃಷ್ಣನನ್ನು ಎಲ್ಲಾದರೂ ಕಂಡರೆ ಗೋಪಿಕೆಯರು ಅವನ ಸುತ್ತ ಸೇರಿ –

ಬಾರೋ ಮನೆಗೆ ಗೋವಿಂದ–
ನಿನ್ನಂಘ್ರಿಕಮಲವ
ತೋರೋ ಎನಗೆ ಮುಕುಂದ
ನಲಿದಾಡು ಮನದಲಿ
ಮಾರ ಪಿತ ಆನಂದ ನಂದನ್ನ ಕಂದ

ಎಂದು ಹಂಬಲಿಕೆಯನ್ನು ವ್ಯಕ್ತ ಪಡಿಸುತ್ತಾ ಆನಂದದಿಂದ ಸಮಾಗಮ ಹೊಂದುವರು.

ಕೃಷ್ಣ ಗೋಪಿಯರ ಸಮಾಗಮಕ್ಕಿಂತ. ಗೋಪಿಯರು ಅನುಭವಿಸುವ ವಿರಹವೇದನೆಯಲ್ಲಿ ದಿವ್ಯ ಪ್ರೇಮದ ಸ್ವರೂಪ ವ್ಯಕ್ತವಾಗುವುದು. ಶ್ರೀಕೃಷ್ಣ ಮತ್ತು ಬಲರಾಮರು ಅಕ್ರೂರನೊಡನೆ ಮಧುರೆಗೆ ತೆರಳುವ ಸುದ್ದಿ ತಿಳಿದು ಗೋಪಿಕೆಯರು ವಿಹ್ವಲರಾಗುವರು. ದುಃಖಿತರಾದ ಅವರು ಕೃಷ್ಣನನ್ನು ಕಳಕಳಿಯಿಂದ,

ಹಲವುಕಾಲವು ನಿನ್ನ ಸ್ನೇಹ ಸುಖವ
ಹಾರೈಸಿಕೊಂಡಿರುತಿಹ
ಲಲನವ್ಯೂಹವ ಬಿಟ್ಟು ಅಕ್ರೂರನೊಡನೆ
ನೀ ಮಧುರೆಗೆ ಹೋದರೆ
ಕಳೆಯಲಾಪೆವೇ ಕಾಂತ ಕೇಳು ದಿನವ
ಈ ಕಂತುವಿನ ಭಾದೆಗೆ
ಘಳಿಗೆಗೊಂದು ಯುಗವಾಗಿ ತೋರು
ತಿಹುದೋ ಜಲಜಾಕ್ಷ ನೀನಿಲ್ಲದೆ

ವಿಧವಿಧವಾಗಿ ಭಿನ್ನವಿಸುವರು. ಅವನನ್ನು ಸಮಾಧಾನಪಡಿಸುವಲ್ಲಿ ಶ್ರೀಕೃಷ್ಣನಿಗಂತೂ ಸಾಕಾಗಿ ಹೋಗುತ್ತದೆ. ಹಾಗೂ ಹೀಗೂ ಅವರಿಂದ ಮುಕ್ತನಾಗಿ ಬಲರಾಮನೊಂದಿಗೆ ಅಕ್ರೂರನೊಡಗೂಡಿ ಮದುರೆಗೆ ಹೊರಡುವನು. ಮಧುರೆಗೆ ಶ್ರೀಕೃಷ್ಣನು ಹೋದ ನಂತರ ಅವನೊಡನೆ ನಡೆಸಿದ ಸರಸ ಸಲ್ಲಾಪಗಳನ್ನು ನೆನೆದು ಗೋಪಿಕೆಯರು ಪರಿತಪಿಸುವರು. ಮಧುರೆಯ ಲಲನಾಂಗನೆಯರ ಜಾಲದಲ್ಲಿ ಸಿಕ್ಕಿ ಬಿದ್ದನೋ ಎಂದು ಯೋಚಿಸುವರು. ಶ್ರೀಕೃಷ್ಣನಲ್ಲಿ ನಿಷ್ಕರುಣತೆಯನ್ನು ಆರೋಪಿಸುವರು. ಹೀಗೆ ಅವರು ದುಃಖಿತರಾಗಿದ್ದಾಗ ಭೃಂಗವೊಂದು ಹಾರಿ ಬರುವುದು. ಅದನ್ನು ಶ್ರೀಕೃಷ್ಣನ ದೂತನೆಂದು ಬಗೆದು ತಮ್ಮ ವಿರಹ ವೇದನೆಯನ್ನು ಅದರ ಮುಂದೆ ತೋಡಿಕೊಳ್ಳುವರು.

ಭೃಂಗ ನಿನ್ನಟ್ಟಿದನೇ ಶ್ರೀರಂಗ
ಮಧುರೆಲಿ ನಿಂದು
ಅಂಗಜಲುಬ್ಧಕ ಪೂಗೋಲ್ಗಂಗಳ
ತಡೆಯನಿಕ್ಕಿ
ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ
ಗುರಿಯೆಚ್ಚು
ಹಿಂಗಿಸುತೈಧಾನೆ ಅಸುವ ಹೇ ಕಿತವಾ

ತಮ್ಮ ಅಂತರಂಗದಲ್ಲಿ ಆಗುತ್ತಿದ್ದ ವಿಹ್ವಲವನ್ನು ಸೈರಿಸಿಕೊಂಡು ತುಸು ಯೋಚಿಸಿ 'ಅವನೋ ಲಕ್ಷ್ಮೀರಮಣ, ನಾವೋ ಸೂಕ್ಷ್ಮರಾದ ಗೊಲ್ಲತಿಯರು, ಅವನಲ್ಲಿ ಬ್ರಹ್ಮಾಂಡವೇ ಅಡಗಿದೆ, ನಾವು ಹಸುವಿನ ಹಾಲು ಕುಡಿದು ತೃಪ್ತರಾಗಿರುವವರು. ನಾವು ಆತನನ್ನು ಬಯುಸುವುದು ಉಚಿತವಲ್ಲ' ಎಂದು ಮರುಗುವರು.

ಶ್ರೀಪಾದರಾಜರು ತಮ್ಮ ಕೃತಿಗಳನ್ನು ಕೃಷ್ಣನಿಗಾಗಿಯೇ ಮೀಸಲಾಗಿಟ್ಟವರಂತೆ ಕಂಡು ಬರುವುದು. ಕೃಷ್ಣನ ಬಗ್ಗೆಯೇ ಕಾಳಜಿ ತೋರಿರುವ ಅವರು ಅವನ ಸಾಂಸಾರಿಕ ಜೀವನದಲ್ಲಿಯೂ ಪ್ರವೇಶಿಸಿದ್ದಾರೆ. ಸವತಿ ಮಾತ್ಸರ್ಯವನ್ನು ವಿಡಂಬನೆಯ

( 28ನೇ ಪುಟ ನೋಡಿ )

# ರಾಮಾಯಣದಲ್ಲಿ ಸಂಗೀತ-ನೃತ್ಯ

ಆದಿಕಾವ್ಯವಾದ ವಾಲ್ಮೀಕಿ ರಾಮಾಯಣದಲ್ಲಿ ಆ ದಿನದ ಭಾರತೀಯ ಸಭ್ಯತೆ ಸಂಸ್ಕೃತಿಗಳು ಎಲ್ಲ ಕೋನಗಳಿಂದಲೂ ಪ್ರತಿಬಿಂಬಿತವಾಗುವಂತೆ ವರ್ಣಿಸಲ್ಪಟ್ಟಿವೆ. ಸಮಸ್ತ ಶಾಸ್ತ್ರೀಯ ವಿಜ್ಞಾನಕ್ಕೆ ಮೂಲಾಧಾರವಾದ ವೇದಗಳೇ ರಾಮಾವತಾರಕಾಲದಲ್ಲಿ ವಾಲ್ಮೀಕಿ ಮಹರ್ಷಿಯಿಂದಾಗಿ ರಾಮಾಯಣದ ರೂಪದಲ್ಲಿ ಅವತರಿಸಿತೆಂದು ಹೇಳುತ್ತಾರೆ. ಅದಕ್ಕೆ ತಕ್ಕಂತೆಯೇ ವೇದವಿದ್ಯಾ ಪಾರಂಗತರಾದ ಕುಶಲವರಿಗೆ ಆ ಮಹರ್ಷಿ ತನ್ನ ರಾಮಾಯಣ ಕೃತಿಯನ್ನು ವೇದೋಪಬೃಂಹಣಾರ್ಥವಾಗಿ ತಿಳಿಸಿಕೊಟ್ಟು ಪ್ರಚಾರಕ್ಕೆ ತಂದನೆಂದು ಕಾವ್ಯಾವತರಣಿಕೆಯಲ್ಲಿಯೇ ತಿಳಿಸಲಾಗಿದೆ. ಕುಶೀಲವರೂಪರಾದ ಕುಶಲವರು ಮೊದಲು ಆ ಕಾವ್ಯವನ್ನು ಮುನಿಜನಾಶ್ರಮಗಳಲ್ಲೂ ನಂತರ ನಗರ ವೀಧಿಗಳಲ್ಲೂ ಕೊನೆಗೆ ಶ್ರೀರಾಮನ ಆಸ್ಥಾನದಲ್ಲೂ ಮಧುರವಾಗಿ ಹಾಡಿದರು ಹೀಗೆ ಈ ಕಾವ್ಯವು ಸಂಗೀತದಿಂದಲೇ ಶ್ರೀಕಾರ ಹೊಂದಿ ಸಂಗೀತಮಯವಾಗಿಯೇ ಪ್ರಚಾರಕ್ಕೆ ಬಂದಿತು. ಕಾವ್ಯರಚನೆಯಲ್ಲಿ ಅಂತರ್ಗತವಾದ ಸಂಗೀತತತ್ತ್ವವನ್ನು, ಗಂಧರ್ವ ರೂಪಿಗಳೂ ಗಾಂಧರ್ವ ತತ್ತ್ವಜ್ಞರೂ ಆದ ಕುಶಲವರ ಗಾನ ಕಲಾ ಕೌಶಲವನ್ನು ಗ್ರಂಥಾವತರಣಿಕೆಯ ಕೆಳಗಿನ ವಾಕ್ಯಗಳು ಸ್ಪಷ್ಟವಾಗಿ ವಿವರಿಸುತ್ತವೆ.

ಪಾಠ್ಯೇ ಗೇಯೇ ಚ ಮಧುರಂ
ಪ್ರಮಾಣೈಸ್ತ್ರಿಭಿರನ್ವಿತಮ್
ಜಾತಿಭಿಃ ಸಪ್ತಭಿರ್ಬದ್ಧ
ತಂತ್ರೀಲಯ ಸಮನ್ವಿತಮ್
ರಸೈಃ ಶೃಂಗಾರ ಕಾರುಣ್ಯ
ಹಾಸ್ಯ ವೀರ ಭಯಾನಕೈಃ
ರೌದ್ರಾದಿಭಿಶ್ಚಸಂಯುಕ್ತಮ್
ಕಾವ್ಯಮೇ ತದಗಾಯತಾಮ್
ತೌ ತು ಗಾಂಧರ್ವ ತತ್ತ್ವಜ್ಞೌ
ಮೂರ್ಛನಾ ಸ್ಥಾನಕೋವಿದೌ
ಭ್ರಾತರೌ ಸ್ವರಸಂಪನ್ನೌ
ಗಂಧರ್ವಾವಿವ ರೂಪಿಣೌ
(1–4–8, 9, 10)

ಡಾ॥ ಎಂ. ಸಂಗಮೇಶಂ ಎಂ.ಎ.,

ಈ ವಾಕ್ಯಗಳು ರಾಮಾಯಣವು ವೇದ ತ್ರಯದಂತೆಯೇ, ಗೇಯವೂ, ಶ್ರಾವ್ಯ ಮಧುರವೂ ಆದದ್ದೆಂದು ನಿರೂಪಿಸುತ್ತವೆ. ಪ್ರಧಾನವಾದ ಜಾತಿ (ರಾಗ) ಸಪ್ತಕದೊಡನೆ ತ್ರಿ ಲಯ ಸಮನ್ವಿತವಾಗಿ ರಸಾಪ್ರಮಾಣವಂತೆ ಸ್ಥಾನ ಮೂರ್ಛನಾದ್ಯಾದಿಗಳನ್ನು ತಿಳಿಸುತ್ತ, ಸ್ವರಸಂಪನ್ನತೆಯನ್ನು ಪ್ರಕಟಿಸುತ್ತ, ಕುಶಲವರು ಇದನ್ನು ಗಾನ ಮಾಡಿದರು. ಹೀಗೆ ಇವರಿಂದ ಸಂಗೀತ ಕೃತಿಗಳೂ, ಅವುಗಳನ್ನು ಹಾಡುವ ಗಾಯಕರಿಗೂ ಸಮಸ್ತ ವಸ್ತು ಲಕ್ಷಣ ಸಂಪನ್ನತೆ, ಶಾರೀರಕ ಧರ್ಮಗಳು ಅಂದಿನ ದಿನಗಳಲ್ಲೇ ಅತಿ ಹೆಚ್ಚಾಗಿದ್ದಿತೆಂಬುದು ತಿಳಿದು ಬರುತ್ತವೆ. ಕುಶಲವರು ಗಂಧರ್ವರು ಕುಶೀಲ ವೇಷಧಾರಿಗಳೆಂದು ವರ್ಣಿಸಲ್ಪಟ್ಟವರು. ಶ್ರುತಿ, ಲಯ, ರಾಗ, ಸಂಗೀತ ತಾನ ಸ್ವರ–ಗಳಂತಹ ಸಮಸ್ತ ಲಕ್ಷಣಗಳೂ ತಿಳಿದುಕೊಂಡು ರಸೋಪೇತವಾಗಿ ಸುಮಧುರವಾದ ಗೇಯಕಾವ್ಯವನ್ನು ಪಡೆದುಕೊಂಡು ಅವಸರಾನುಕೂಲವಾಗಿ ಅದನ್ನೇ ಸಾಧ್ಯವಾಗಿ ಹಾಡುತ್ತ ಪ್ರವಚಿಸುತ್ತ ಅವರು ಈ ಕಾವ್ಯವನ್ನು ಮುನಿಜನಾಶ್ರಮಗಳಲ್ಲಿ ಹಾಡಿ ಪ್ರಶಂಸೆ ಪಡೆದರು ಎಂಬುದು,

ಸಾಧುಸಾಧ್ವಿತಿ ತಾವೂಚುಃ
ಪರಂ ವಿಸ್ಮಯ ಮಾಗತಾಃ
ತೇ ಪ್ರೀತ ಮನಸಃ ಸರ್ವೇ
ಮುನಯೋ ಧರ್ಮವತ್ಸಲಾಃ
ಪ್ರಶಶಂಸುಃ ಪ್ರಶಸ್ತವ್ಯೌ
ಗಾಯಮಾನೌ ಕುಶೀಲವೌ
(1–4–16, 17)

–ಎಂದು ಹೇಳಿದ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಇಂದಿನ ದಾಸರ ಹಾಡುಗಳು, ಬುರ್ರ ಕಥೆಗಳು ಮೊದಲಾದ ಪ್ರಕ್ರಿಯೆಗಳು ಅಂದು ಮತ್ತೂ ಉದಾತ್ತವಾದ ಶೈಲಿಯಲ್ಲಿದ್ದವೆಂಬುದು ತಿಳಿದು ಬರುತ್ತದೆ. ಆದರೆ ಈ ಸಂದರ್ಭದಲ್ಲಿ ನೃತ್ಯಾಭಿನಯಗಳು ಹೇಗಿದ್ದವೆಂಬುದು ತಿಳಿಯದು. ಅಂದಿನ ಅಯೋಧ್ಯಾಪುರ ವರ್ಣನೆಯಲ್ಲಿ ನೃತ್ಯವಾದ್ಯ ಗೀತ ನಾಟಕಾದಿಗಳು ಅತ್ಯುಚ್ಚ ಸ್ಥಿತಿಯಲ್ಲಿದ್ದವೆಂದು ಹೇಳಲಾಗಿದೆ.

'ವಧೂ ನಾಟಕ ಸಂಘೈಶ್ಚ ಸಂಯುಕ್ತಾಂ
ಸರ್ವತಃ ಪುರೀಮ್' (1–5–12)
'ದುಂದುಭಿಭಿರ್ಮೃದಂಗೈಶ್ಚ
ವೀಣಾಭಿಃ ಪಣವೈಸ್ತಥಾ
ನಾದಿತಾಂ ಭೃಶ ಮತ್ಯರ್ಥಂ
ಪೃಥಿವ್ಯಾಂ ತಾಮನುತ್ತಮಾಮ್'
(1–5–18)

ವೀಣಾ, ಪಣವ, ಮೃದಂಗ, ದುಂದುಭಿ ನಿಸ್ವನ ಭರಿತವಾದ ಆ ನಗರದಲ್ಲಿ ಅನೇಕ ನಾಟಕ ಸಂಘಗಳು–ಅದರಲ್ಲಿಯೂ ಸ್ತ್ರೀಯರಿಂದ ಕೂಡಿದ ನಾಟಕ ಸಂಘಗಳೂ–ಇದ್ದವೆಂದರೆ, ಆಯಾ ಕಲೆಗಳ ಉನ್ನತಿಯನ್ನು ಕುರಿತು ಬೇರೆ ಹೇಳಬೇಕಾಗಿಲ್ಲ. ವಶಿಷ್ಠರು ಕಳುಹಿಸಿದ ವಾರ್ತೆಯನ್ನು ಕೇಳಿ ಸೋದರಮಾವ ಮನೆಯಿಂದ ವೇಗವಾಗಿ ಅಯೋಧ್ಯೆಯತ್ತ ಧಾವಿಸಿದ ಭರತನಿಗೆ ಪುರಪ್ರವೇಶ ಮಾಡುವಾಗ ಅಲ್ಲಿ ಯಾವುದೇ ವಿಧವಾದ ಗೀತ ವಾದ್ಯ ಧ್ವನಿ ಕೇಳಿಬರದೆ ಆಶ್ಚರ್ಯಗೊಳ್ಳುತ್ತಾನೆ.



# ತಿ. ತಿ. ದೇವಸ್ಥಾನಗಳು, ತಿರುಪತಿ.



# ಒಂದು ಹಕ್ಕಿನೋಟ

1 ದೇವಸ್ಥಾನಗಳು 42

2 ಸ್ಥಳಾವಕಾಶ
- ಅ) ಸತ್ರಗಳು 10
- ಆ) ಬಾಡಿಗೆ ಕೋಣೆಗಳು, ಮನೆಗಳು 903
- ಇ) ಅತಿಥಿ ಗೃಹಗಳು 9

3 ಫಲಾಹಾರ ಮಂದಿರಗಳು 9

4 ಆಸ್ಪತ್ರೆಗಳು 9

5 ಶೈಕ್ಷಣಿಕ ಸಂಸ್ಥೆಗಳು
- ಅ) ಸಂಸ್ಕೃತ ಹಾಗೂ ಧಾರ್ಮಿಕ 5
- ಆ) ಕಲಾ, ವಿಜ್ಞಾನ ಕಾಲೇಜುಗಳು 6
- ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 5
- ಈ) ಶಾಲೆಗಳು 8

6 ದತ್ತಿ ಸಂಸ್ಥೆಗಳು 3

7 ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 32

8 ಹಯನೋತ್ಪಾದನೆ
- ಅ) ಜಾನುವಾರು ಸಂಖ್ಯೆ 384
- ಆ) ಬೇಸಾಯದ ಭೂಮಿ ಎಕರೆ 269

9. ಕಾನನ ಪ್ರದೇಶ ಎಕರೆ 7160

10 ತೀರ್ಥಗಳು 16

11 ಆಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು) 2

12 ವಸ್ತು ಸಂಗ್ರಹಾಲಯಗಳು 2

13. ವಾಹನಗಳು 169

14 ಆಡಳಿತ ವಿಭಾಗಗಳು 108

15 ಕೆಲಸಗಾರರು 5772

16 ಹಿಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 17

17 ವಿಚಾರಣಾ ಕೇಂದ್ರಗಳು 21

18. ಕಲ್ಯಾಣ ಮಂಟಪಗಳು 10

19 ಮುದ್ರಣ ಶಾಲೆ 1

20 ಪ್ರಕಟನೆಗಳು
- ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
- ಆ) ವಾರ್ಷಿಕ ಕ್ಯಾಲೆಂಡರ್ ಹಾಗೂ ಪಂಚಾಂಗ

21 ಯಾತ್ರಿಕರ ಸಂಖ್ಯೆ 1981–82 ರಲ್ಲಿ 76,87,279

22 1980–81 ರ ಹುಂಡಿಯ ಕಾಣಿಕೆಗಳು ರೂ 814 51 ಲಕ್ಷ

ಭೇರೀ ಮೃದಂಗ ವೀಣಾನಾಂ ಕೋಣ
ಸಂಘಟ್ಟಿತಃ ಪುನಃ
ಕಿಮದ್ಯ ಶಬ್ದೋ ವಿರತಸ್ಸದಾ ದಿನಗತಿಃಪುರಾ
(1–71–29)

–ನಿತ್ಯೋತ್ಸವಗಳಿಂದ ವಿಧೇಯವಾಗಿ ನಡೆಸುವ ನೃತ್ಯಗಾನಗಳಿಂದಲೂ, ಬಂದು ಹೋಗುವ ಭಕ್ತ ದರ್ಶಕರಿಂದಲೂ ನಿತ್ಯ ಕೋಲಾಹಲದಿಂದ ಕೂಡಿರಬೇಕಾದ ದೇವಾಲಯಗಳೆಲ್ಲ ನಿರ್ವಾಣಪ್ರಾಯವಾಗಿ ನಿಶ್ಶಬ್ದವಾಗಿದ್ದಿತಂತೆ

ಶೂನ್ಯಾನಿ ದೇವಾಗಾರಾಣಿ
ನ ಭಾಂತೀಹ ಯಥಾ ಪುರಾ'
(1–71–40)

–ಇವುಗಳೆಲ್ಲ ಅಂದಿನ ಸಮಾಜದಲ್ಲಿ ನೃತ್ಯಗೀತೆಗಳಿಗಿದ್ದ ಸ್ಥಾನವನ್ನು ತಿಳಿಯಪಡಿಸುತ್ತವೆ. ಈ ಕಲೆಗಳಲ್ಲಿನ ವಿದ್ವಜ್ಜನರನ್ನು ಅವಸರೋಚಿತವಾಗಿ ಸನ್ಮಾನಿಸುವುದು, ಸಂದರ್ಭೋಚಿತವಾಗಿ ಅವರ ವಿದ್ವತ್ತೆಯನ್ನು ಬಳಸಿಕೊಳ್ಳುವುದು ನಡೆಯುತ್ತಿದ್ದಿತೆಂದು ತಿಳಿಯುತ್ತದೆ. ಋಷ್ಯಶೃಂಗನನ್ನು ಬರಮಾಡಿಕೊಳ್ಳಲು ರೋಮಪಾದನು ವೇಶ್ಯಾಜನವನ್ನು ಬಳಸುತ್ತಾನೆ. ಅವರು ಸಮಯೋಚಿತವಾದ ವೇಶಭೂಷಣಗಳನ್ನು ಧರಿಸಿ, ನರ್ತಿಸುತ್ತ ಹೊರಟು ಆ ಮುನಿಕುಮಾರನನ್ನು ಆಕರ್ಷಿಸಿ, ನಗರಕ್ಕೆ ಕರೆತರುತ್ತಾರೆ (1–10–11, 36) ದಶರಥನು ಯಜ್ಞವಾಟಿಕೆಯನ್ನು ನಿರ್ಮಿಸಿದಾಗ ಅಲ್ಲಿಗೆ ಬರತಕ್ಕ ರಾಜರಿಗೆ ಬೇಕಾದ ಎಲ್ಲ ಅನುಕೂಲಗಳನ್ನೂ ಏರ್ಪಡಿಸಲು ತಕ್ಕ ಶಿಲ್ಪ, ಖನಕ, ಗಣಕಾದಿಗಳೊಡನೆ ನಟ ನರ್ತಕಿಯರನ್ನೂ ಸಹ ನಿಯಮಿಸುವನು.

ಕರ್ಮಾಂತಿಕಾನ್ ಶಿಲ್ಪಕಾರಾನ್
ವರ್ಧಕೀನ್ ಖನಕಾನಪಿ
ಗಣಕಾನ್ ಶಿಲ್ಪಿನಶ್ಚೈವ ತಥೈವ
ನಟನರ್ತಕಾನ್
(1–13–7)

ಶ್ರೀರಾಮ ಜನನ ಸಂದರ್ಭವನ್ನು ಬಳಸಿಕೊಂಡು ಅತ್ತ ದೇವಲೋಕದಿಂದ ಹಿಡಿದು ಇತ್ತ ಭೂಲೋಕನೆಲ್ಲವೂ ಉತ್ಸಾಹ ಸಂಭ್ರಮಗಳಿಂದ ತುಂಬಿ ಅರಳಿತು. ಅಯೋಧ್ಯೆಯಲ್ಲಿ ಮಹೋತ್ಸವವನ್ನು ನಡೆಸಿ ಆನಂದಿಸಿದರು ಸಾಮೂಹಿಕವಾದ ನೃತ್ಯಗಾಯನಗಳಿಗೆ ಮಹದವಕಾಶ ಲಭಿಸಿತು.

ಜಗುಃ ಕಲಂ ಚ ಗಂಧರ್ವಾ
ನನೃತುಶ್ಚಾಪ್ಸರೋಗಣಾಃ
ದೇವ ದುಂದುಭಯೋ ನೇದುಃ
ಪುಷ್ಪವೃಷ್ಟಿಶ್ಚ ಖಾಚ್ಚ್ಯುತಾ
ಉತ್ಸವಶ್ಚ ಮಹಾನಾಸೀ
ದಯೋಧ್ಯಾಯಾಂ ಜನಾಕುಲಃ
ರಥ್ಯಾಶ್ಚ ಜನಸಂಬಾಧಾ
ನಟನರ್ತಕಸಂಕುಲಾಃ
ಗಾಯನೈಶ್ಚ ವಿರಾವಿಣ್ಯೋ
ವಾದನೈಶ್ಚ ತಥಾಪರೈಃ
(1–18–17, 18, 19)

ನಟರು, ನರ್ತಕರು, ಗಾಯಕರು ವಾದಕರು ಎಲ್ಲರೂ ಎಲ್ಲರೀತಿಯಲ್ಲಿ ತಮ್ಮ ತಮ್ಮ ಕೌಶಲಕ್ಕೆ ತಕ್ಕಂತೆ ಊರು ಕೇರಿಗಳೆಲ್ಲ ತುಂಬುವಂತೆ ಉತ್ಸವಗಳಲ್ಲಿ ಪಾಲುಗೊಂಡರು. ಇದು ಇಂದಿನ ಸಾಮೂಹಿಕ ಉತ್ಸವಗಳನ್ನು ನೆನಪಿಗೆ ತರುತ್ತ, ಇವುಗಳ ಪ್ರಾಚೀನತೆಯನ್ನೂ ತಿಳಿಸುತ್ತವೆ.

ರಾಜಾಂತಃಪುರಗಳಲ್ಲಿಯೂ, ಶ್ರೀಮಂತರ ಮನೆಗಳಲ್ಲಿಯೂ ಎಲ್ಲ ಕಾಲದಲ್ಲೂ, ಸಂತಾಪ ಸೂಚಕವಾಗಿಯೂ, ಸಂಗೀತ ನೃತ್ಯ ಗೀತೆಗಳು ಅನೂಚಾನನಾಗಿ ಬಳಕೆಗೆ ಬರುತ್ತಿದ್ದವೆಂಬುದನ್ನು ಸೂಚಿಸಲು, ಕಿಷ್ಕಿಂಧಾಪುರವನ್ನು ವರ್ಣಿಸುವಲ್ಲಿಯೂ, ಕುಶನಾಭನ ಕುಮಾರಿಯರ ಕಥೆಯಲ್ಲಿಯೂ, ಹೇಳಿರುವ ಮಾತುಗಳು ಪೂರಕವಾಗುತ್ತವೆ ಸೀತಾನ್ವೇಷಣೆಗಾಗಿ ವಾನರ ಸೇನೆಯೊಡನೆ ಕೂಡಿ ಬರಬೇಕಾದ ಸುಗ್ರೀವನು ತಡಮಾಡಿದಾಗ ಶ್ರೀರಾಮನ ಪರವಾಗಿ ಲಕ್ಷ್ಮಣನು ಕಿಷ್ಕಿಂಧೆಗೆ ಬರುತ್ತಾನೆ. ಅಲ್ಲಿ ಅವನಿಗೆ ನಿರಂತರವಾಗಿ ನಡೆಯುತ್ತಿದ್ದ ಸಂಗೀತ ಸಮಾರಾಧನೆ ಎದುರಾಗುತ್ತದೆ.

ಪ್ರವಿಶನ್ನೇವ ಸತತಂ
ಸುಶ್ರಾವ ಮಧುರ ಸ್ವನಂ
ತಂತ್ರೀಗತ ಸಮಾಕೀರ್ಣಂ
ಸಮಗೀತಪದಾಕ್ಷರಂ
(4–33–21)

ಹೀಗೆ ಬರೆದಿರುವುದರಿಂದಾಗಿ ವಾನರರಲ್ಲಿಯೂ ಸಹ ಸುಮಧುರವಾಗಿ ಸ್ವರವೆತ್ತಿ ಹಾಡುವವರೂ, ವೀಣೆ ಮೊದಲಾದುವನ್ನು ಬಾಜಿಸುವವರೂ, ತಾಲಲಯಗಳನ್ನು ಸಮರ್ಪಕವಾಗಿ ಛಂದೋನುಸಾರವಾಗಿ ನಿರ್ವಹಿಸಬಲ್ಲ ವಿದ್ವಾಂಸರಿದ್ದರೆಂಬುದು ತಿಳಿದುಬರುತ್ತದೆ. ಹನುಮಂತನು ಹಿರಿಯ ಸಂಗೀತ ವಿದ್ವಾಂಸನೆಂದು ಪ್ರಸಿದ್ಧನಾಗಿದ್ದಾನೆ. 'ಹನುಮದ್ಭರತ' ವೆಂಬುದೂ ಸಹ ಭಾರತ ಶಾಸ್ತ್ರಜ್ಞರಿಗೆ ತಿಳಿದಿರುವುದೇ ಆಗಿದೆ.

ಕುಶನಾಭನಿಗೆ ನೂರುಮಂದಿ ಕುಮಾರಿಯರು. ರೂಪಲಾವಣ್ಯಯವ್ವನ ಸಂಪನ್ನರಾದ ಈ ಕನ್ನೆಯರು ಒಮ್ಮೆ ವನವಿಹಾರಕ್ಕೆ ಹೊರಟು ಹೆಚ್ಚಿನ ಉತ್ಸಾಹದಿಂದ ನೃತ್ಯಗಾಯನಗಳಲ್ಲಿ ವಾದ್ಯವಿಲಾಸಗಳಲ್ಲಿ ಆನಂದಿಸತೊಡಗಿದರು.

ಗಾಯಂತ್ಯೋ ನೃತ್ಯಮಾನಾಶ್ಚ
ವಾದಯಂತ್ಯಶ್ಚ ಸರ್ವಶಃ
ಆಮೋದಂ ಪರಮಂ ಜಗ್ಮು
ರ್ವರಾಭರಣಭೂಷಿತಾಃ
(1–32–13)

'ಯುವತಿಯರೂ, ರೂಪವತಿಯರೂ, ಆಭರಣಾಲಂಕೃತರೂ, ದೇಹದಪರಿವೆ ಇಲ್ಲದೆ ಆನಂದ ತುಂದಿಲರಾಗಿ ಹಾಡಿ ಆಡುತ್ತಿದ್ದ ಆ ಕನ್ನೆಯರನ್ನು ನೋಡಿ ವಾಯುದೇವನಿಗೇ ಮತಿ ಚಲಿಸಿತು' ಎಂದು ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ತಿಳಿಸುತ್ತಾನೆ ಸ್ವತಃಸಿದ್ಧವಾದ ಸೌಂದರ್ಯದ ಆಕರ್ಷಣೆಗೆ ಸಂಗೀತವು ಮತ್ತಷ್ಟು ಪೂರಕವಾಗುವುದೆಂಬುದನ್ನು ವಿವರಿಸಿ ಹೇಳುವ ಸತ್ಯ ಇದು. ಇಂದಿನ ವಧು ಪರೀಕ್ಷೆಯಲ್ಲೂ ಈ ಸಂಗೀತವು ಸ್ಥಾನವನ್ನು ಪಡೆದಿದೆ ಎಂದರೆ ಅದು ಹೊರಹಾಕುವ ಈ ಪ್ರಾಚೀನ ತಥ್ಯವೇ ಪೂರಕ ವೆಂಬುದು ಸ್ಪಷ್ಟ.

ಸಂಗೀತ ನೃತ್ಯಗಳು ತಾವು ಆನಂದಿಸಲೆಂದೇ ಅಲ್ಲ, ಬೇರೊಬ್ಬರನ್ನು ಆನಂದಗೊಳಿಸಲೂ ವಿನಿಯೋಗವಾಗುತ್ತಿದ್ದವು. ಅತಿಥಿ ಅಭ್ಯಾಗತರನ್ನು ಆದರಿಸಿ ತೋರುವ ಮರ್ಯಾದೆಗಳಲ್ಲಿ ನೃತ್ಯಗೀಪ್ರದರ್ಶನಗಳನ್ನು ಏರ್ಪಡಿಸುವ ಪದ್ಧತಿ ಆ ಕಾಲಕ್ಕೆ ಆಚರಣೆಯಲ್ಲಿದ್ದಿತೆನ್ನಲು ಭರತ ಶತ್ರುಘ್ನರನ್ನೂ ಅವರ ಸೈನ್ಯವನ್ನೂ ಆದರಿಸಿ ಸತ್ಕರಿಸಲು ಭರದ್ವಾಜ ಮುನಿಯು ಮಾಡಿದ ಏರ್ಪಾಡುಗಳು ಸಾಕ್ಷಿಯಾಗುತ್ತವೆ. ಆತ ಮಹರ್ಷಿ, ತಪೋಧನ ಆತನ ಸಂಕಲ್ಪ ಅಮೋಘ, ಸರಿ, ಆತ ಅಪೇಕ್ಷಿಸಿದ್ದೇ ತಡ, ನಾರದ ತುಂಬರರೂ, ಅಲಂಬಸೆ ಮುಂತಾದ ಅಪ್ಸರೆಯರೂ ವೀಣಾ ಪಾಣಿಗಳಾಗಿ ಸಹಸ್ರಸಂಖ್ಯೆಯಲ್ಲಿ ಬಂದು ತಮ್ಮ ನೃತ್ಯಗಾನ ಲಯವಿನ್ಯಾಸ ವಾದ್ಯವಿಶೇಷಗಳಿಂದ ಭರತನನ್ನೂ ಆತನ ಸೈನಿಕರನ್ನೂ ಆನಂದ ಗೊಳಿಸಿದರು.

'ಪ್ರಜಗುರ್ದೇವಗಂಧರ್ವಾ ವೀಣಾಃ
ಪ್ರಮುಮುಚುಸ್ಸ್ವರಾನ್' 2–91–26
'ವಿವೇಶೋಚ್ಚಾರಿತಶ್ಲಕ್ಷ್ಣಃ ಸಮೋ
ಲಯಗುಣಾನ್ವಿತಃ 2–91–27
'ಅಗುರ್ವಿಂಶತಿ ಸಾಹಸ್ರಾನ್ನಂದನಾದಪ್ಸ
ರೋಗಣಾಃ 2–91–45
'ನಾರದಸ್ತುಂಬುರುರ್ಗೋಪಃ
ಪ್ರವರಾ ಸೂರ್ಯ ವರ್ಚಸಃ
'ಏತೇ ಗಂಧರ್ವ ರಾಜಾನೋ
ಭರತಸ್ಯಾಗ್ರತೋ ಜಗುಃ' 2–91–46
'ಅಲಂಬುಸಾ ಮಿಶ್ರಕೇಶೀ
ಪುಂಡರೀಕಾಥವಾಮನಾ
ಉಪಾನೃತ್ಯಂತ ಭರತಂ
ಭರದ್ವಾಜಸ್ಯ ಶಾಸನಾತ್'
2–91–47

ನಾಟ್ಯಗಾನಗಳಿಂದ ಒಬ್ಬರನ್ನು ಸಂತೃಪ್ತಿಗೊಳಿಸಬೇಕೆಂದರೆ ಆ ವಿದ್ಯೆಗಳನ್ನು ತಿಳಿದವರ ಬಳಿ ಸ್ವಚ್ಛಂದವಾಗಿ ಆಡಿ ಹಾಡಿದರೆ ಸಾಲದು. ತಮ್ಮ ಕಲಾಪ್ರಾವೀಣ್ಯವನ್ನೆಲ್ಲ ಪ್ರದರ್ಶಿಸಿದ್ದಲ್ಲದೆ ಅವರಿಗೆ ತೃಪ್ತಿಯುಂಟಾಗದು. ಅದೇನೇ ಆದರೂ ತಿಳಿದವರ ಬಳಿ ತಮ್ಮ ಕಲಾಕೌಶಲವನ್ನು ಪ್ರದರ್ಶಿಸಿ, ಅವರ ಗೌರವ ಸನ್ಮಾನಗಳನ್ನು ಹೊಂದುವುದೂ ಕಲೆಗಾರರು ಅಪೇಕ್ಷಿಸುವಂತಹುದೇ. 'ವಿದ್ವಾನೇವ... ವಿದ್ವಜ್ಜನ ಪರಿಶ್ರಮಂ' ಎನ್ನುವುದು ಅಂದಿಗೂ ಇಂದಿಗೂ ಅನ್ವಯಿಸುವ ಸತ್ಯ. "ಯುವಾನೃತ್ಯಂತ ರಾಜಾನಂ ನೃತ್ಯಗೀತ ವಿಶಾರದ" (7–4–20) ಎಂದರೆ ಆ ರಾಜನೂ ಸಹ ನೃತ್ಯಗೀತೆಗಳಲ್ಲಿ ಅಪರಿಮಿತವಾದ ಪಾಂಡಿತ್ಯ ಹೊಂದಿರಬೇಕೆಂಬುದೇ ಆದರ್ಶ ಆದಕ್ಕೆ ತಕ್ಕಂತೆಯೇ ವಾಲ್ಮೀಕಿಯು ರಾವಣನ ಗುಣವನ್ನು ವರ್ಣಿಸುತ್ತ "ಗಾಂಧರ್ವೇ ಭುವಿ ಶ್ರೇಷ್ಠೋ ಬಭೂವ ಭರತಾಗ್ರಜಃ (2–2–35)" ಎಂದು ಆತನಿಗೆ ಗಾಂಧರ್ವವಿದ್ಯೆಯಲ್ಲಿದ್ದ ಪಾಂಡಿತ್ಯವನ್ನು ಸ್ಪಷ್ಟವಾಗಿ ತಿಳಿಸುತ್ತಾನೆ. ಇದರಿಂದಾಗಿ ಅಂದಿನ ರಾಜಕುಮಾರರು, ಸಂಪನ್ನರ ಯುವಕರು ಸಹ ನಾಟ್ಯ ಗಾನಗಳಲ್ಲಿ ತಕ್ಕಷ್ಟು ಶಿಕ್ಷಣವನ್ನು ಪಡೆಯುತ್ತಿದ್ದರೆಂದು ತಿಳಿದು ಬರುತ್ತದೆ

ಸಂಗೀತ ರಸಾನಂದವು ಬ್ರಹ್ಮಾನಂದ ಸಮಾನವೆಂಬ ವಿಷಯ ಮಾಂಡಕರ್ಣಿ ವೃತ್ತಾಂತದಿಂದ ವಿದಿತವಾಗುತ್ತದೆ ಸೀತಾರಾಮಲಕ್ಷ್ಮಣರು ಅರಣ್ಯದಲ್ಲಿ ಸಂಚರಿಸುತ್ತ, ಆಯಾ ಮುನೀಶ್ವರರ ಆಶ್ರಮಗಳಲ್ಲಿ ಆತಿಥ್ಯ ಸ್ವೀಕರಿಸುತ್ತ ಸಾಗುತ್ತಿರುವಲ್ಲಿ ಒಂದುದಿನ ಒಂದು ಸರೋವರದ ಬಳಿ ಅವರಿಗ ನೃತ್ಯಗಾನ ಧ್ವನಿ ಕೇಳಿ ಬರುತ್ತದೆ. ಆದರೆ ಆ ಪ್ರಾಂತದಲ್ಲಿ ಯಾರೂ ಕಂಡು ಬರುವುದಿಲ್ಲ. ನಂತರ ಅವರು ಈ ಆಶ್ಚರ್ಯಕರವಾದ ವಿಷಯವನ್ನು ಕೇಳಿದಾಗ ಧರ್ಮಭೃತಿ ಎನ್ನುವ ಮುನಿ ಅವರಿಗೆ ಮಾಂಡಕರ್ಣಿಯ ಕಥೆಯನ್ನು ಹೇಳುತ್ತಾನೆ

"ಮಾಂಡಕರ್ಣಿ ಮಹಾತಪಸ್ವಿ ಆತ ತನ್ನ ತಪಃ ಪ್ರಭಾವದಿಂದ 'ಪಂಚಶಿರ' ಎಂಬ ಹೆಸರಿನಲ್ಲಿ ಆ ಸರೋವರವನ್ನು ಕಲ್ಪಿಸಿದನು. ಅದರಲ್ಲಿ ಮುಳುಗಿ ಆತ ತಪಸ್ಸು ಮಾಡುತ್ತಿರಲು ದೇವತೆಗಳು ಭಯಪಟ್ಟು ಆತನ ತಪಸ್ಸಿಗೆ ಭಂಗತರಲು ಐದು ಮಂದಿ ಅಪ್ಸರೆಯರನ್ನು ಆತನ ಬಳಿಗೆ ಕಳುಹಿಸಿದರು. ಅವರ ಪ್ರಯತ್ನ ಸಫಲವಾಯಿತು. ಆತ ತಪಸ್ಸನ್ನು ತ್ಯಜಿಸಿ ಆ ಸರೋವರದಲ್ಲೇ ಒಂದು ಭವನವನ್ನು ಏರ್ಪಡಿಸಿಕೊಂಡು ಅವರೊಂದಿಗೆ ವಿಹಾರ ಮಾಡ ತೊಡಗಿದ ನೀವು ಕೇಳಿದ ಸಂಗೀತ ವಾದ್ಯಸ್ವರವು ಆ ಅಪ್ಸರೆಯರದು. ಆ ಮುನಿ ಅವರೊಡನೆ ಇಲ್ಲಿ ಕಾಲ ಕಳೆಯುತ್ತಿದ್ದಾನೆ" (3–11–7 ರಿಂದ 19) ಈ ಸಂದರ್ಭದಲ್ಲಿ,

ತಾಸಾಂ ಸಂಕ್ರೀಡಮಾನಾನಾ
ಮೇಷ ವಾದಿತ್ರ ನಿಸ್ವನಃ
ಶ್ರೂಯತೇ ಭೂಷಣೋನ್ಮಿಶ್ರೋ
ಗೀತ ಶಬ್ದೋ ಮನೋಹರಃ
(3–11–19)

–ಎನ್ನುವ ವಾಕ್ಯದಿಂದ ಅಲ್ಲಿ ನೃತ್ಯಗಾನಗಳೆರಡೂ ಸಡಗರದಿಂದ ನಡೆಯುತ್ತಿದ್ದವೆಂದು ತಿಳಿಯುತ್ತದೆ.

ರಾವಣಾಂತಃಪುರ ಪರಿವಾರದಲ್ಲಿ ಯೂ ಇಂತೆಯೇ ನೃತ್ಯಗಾಯನಗಳಿಂದ ರಾಜನನ್ನು ಮೆಚ್ಚಿಸಿ, ಮೈಮರೆಯುವಷ್ಟು ಆನಂದಿತಗೊಳಿಸುವಂತಹ ನೃತ್ಯಗಾನ ಕಲಾಕಾರರಾದ ಸುಂದರಿಯರೆಷ್ಟೋ ಮಂದಿ ಇದ್ದರೆಂಬುದು ಹನುಮಂತನು ಸೀತೆಯನ್ನು ಹುಡುಕುತ್ತ ಅಲ್ಲಿಗೆ ಬಂದಾಗ ಕಂಡ ದೃಶ್ಯದಿಂದಾಗಿ ತಿಳಿಯುತ್ತದೆ

ನೃತ್ತವಾದಿತ್ರ ಕುಶಲಾ ರಾಕ್ಷಸೇಂದ್ರ
ಭುಜಾಂಕಗಾಃ
ವರಾಭರಣಧಾರಿಣ್ಯೋ ನಿಷಣ್ಣಾ
ದದೃಶೇ ಕಪಿಃ
(5–10–36)

ಅಂಗ ಹಾರೈಸ್ತಥೈವಾನ್ಯಾ
ಕೋಮಲೈರ್ನೃತ್ಯಶಾಲಿನೀ
ವಿನ್ಯಸ್ತ ಶುಭ ಸರ್ವಾಂಗೀ
ಪ್ರಸುಪ್ತಾ ವರವರ್ಣಿನೀ (5–10 6)

ನಾಟ್ಯ ಗಾನಗಳಿಗೆ ವಾದ್ಯಗಳೊಡನೆ ಅವಿನಾಭಾವ ಸಂಬಂಧ ಆ ದಿನಕ್ಕೇ ಅವು ಅನೇಕ ವಿಧವಾಗಿದ್ದವೆಂಬುದು ಹನುಮಂತನು ಅಲ್ಲಿ ನೋಡಿದ ವೀಣಾ, ಪಣವ, ಮಂಡುಕ, ಡಿಂಡಿಮ, ಪಟಹ, ಕಲಶ, ವಿಪಂಚೀ, ಮೃದಂಗಾದಿ ಚಿತ್ರವಿಚಿತ್ರವಾದ ವಾದ್ಯಗಳಿಂದ ಸ್ಪಷ್ಟವಾಗುತ್ತದೆ. ಅವುಗಳನ್ನು ಬಾಜಿಸುವ ಕೌಶಲ ಸಹ ಅನೇಕರಿಗೆ ಇತ್ತೆಂಬುದೂ ಸ್ಪಷ್ಟವಾಗುತ್ತದೆ

ನೃತ್ಯಗಾನ ಕಲೆಗಳು, ವಾದ್ಯ ಪಾಂಡಿತ್ಯ ನಟನಾಭಿನಯಗಳಲ್ಲಿ ಚಾತುರ್ಯ ಇತ್ಯಾದಿಗಳು ಆ ದಿನಗಳಲ್ಲೇ ಬೇರೆ ಬೇರೆ ಜಾತಿಗಳ ಪರವಾದವೆಂದು ರಾಮಾಯಣದಿಂದ ತಿಳಿದು ಬರುತ್ತದೆ. ನಟರು, ನರ್ತಕರು, ಕುಶೀಲವರು, ಶೈಲೂಷರು, ಇತ್ಯಾದಿ ಹೆಸರುಗಳಿಂದ ಆಯಾ ವೃತ್ತಿಗಳವರು ಹೆಸರಿಸಲ್ಪಟ್ಟರು. ವೃತ್ತಿ ಜಾತಿ ಎಂಬುವುಗಳುಂಟಾದಾಗ ಅವುಗಳಿಗೆ ತಕ್ಕ ಕುಲಧರ್ಮಗಳೂ ಉಂಟಾಗುತ್ತವೆ. ಅವರ ನೀತಿ ನಿಯಮಗಳು ಅವರಿಗೇ ನಿಯತವಾಗಿ ಅನ್ವಯವಾಗಿ ಸಮಾಜದಿಂದ ಅಮೋದ ಮುದ್ರೆಯನ್ನು ಪಡೆಯುತ್ತವೆ. ರಾಮನು ಅರಣ್ಯಕ್ಕೆ ಹೊರಡುವ ಮುನ್ನ ಸೀತೆಯನ್ನು ಅಯೋಧ್ಯೆಯಲ್ಲೇ ಇರುವಂತೆ ಹೇಳುತ್ತಾನೆ. ಆಕೆ ಆತನನ್ನು ಬಿಟ್ಟಿರಲು ಇಚ್ಛಿಸಳು. ರಾಮನು ಏನೇನೋ ಹೇಳಿ ಆಕೆಯನ್ನು ಒಪ್ಪಿಸುವಷ್ಟರಲ್ಲಿ ಆಕೆ ಬೇಸರಗೊಂಡು "ಶೈಲೂಷ ಇವ ಮಾಂ ರಾಮ ಪರೇಭ್ಯೋ ಧಾತುಮಿಚ್ಛಸಿ" (2–30–8) ಎನ್ನುತ್ತ ಹೆಂಡತಿಯನ್ನು ಬೇರೆ ಕಡೆ ಬಿಡುವುದೂ ಇರು ಎಂದು ಹೇಳುವುದೂ ಶೈಲೂಷ ಧರ್ಮವಲ್ಲದೆ ಸಾಮಾನ್ಯ ಧರ್ಮವಲ್ಲ ಎಂದು ಸ್ಪಷ್ಟ ಪಡಿಸುತ್ತಾಳೆ ಒಬ್ಬರ ಧರ್ಮ ಇನ್ನೊಬ್ಬರಿಗೆ ಕೆಲಸಕ್ಕೆ ಬಾರದು ಅದು ಸ್ವಧರ್ಮ ವಿರುದ್ಧ. ಎಲ್ಲ ಧರ್ಮಗಳನ್ನೂ ಹಾಗೆಯೇ ಕಾಪಾಡುವುದು ರಾಜಧರ್ಮ

ಸಂಗೀತವೆಂದರೆ ನೃತ್ಯ ಗಾನಗಳಿಂದಲೂ, ವಾದ್ಯ ಘೋಷಗಳಿಂದಲೂ ಕೂಡಿದ್ದೇ ವಿನಃ ಯಾವುದೋ ಒಂದು ಅಂಗದಿಂದ ಮಾತ್ರವಾದಲ್ಲಿ ಅದು ಸಂಗೀತವಾಗಲಾರದು. "ನೃತ್ಯವಾದಿತ್ರ ಗೀತಾನಾಂ ತ್ರಯಂ ಸಂಗೀತ ಮುಚ್ಯತೇ" ಎಂದು ಸಂಗೀತದ ನಿರ್ವಚನ ಹೇಳುತ್ತಾರೆ. ಈ ನಿರ್ವಚನಕ್ಕೂ ಮೂಲ ರಾಮಾಯಣದ ವರ್ಣನೆಗಳೇನೋ ಎನ್ನಿಸುತ್ತದೆ ವರ್ಷಕಾಲವನ್ನು ವರ್ಣಿಸುತ್ತ ವಾಲ್ಮೀಕಿ "ವನೇಷು ಸಂಗೀತಮಿವ ಪ್ರವೃತ್ತಮ್" ಎಂದು, ಅಂದಿನ ವನಾಂತರ ವಾತಾವರಣವನ್ನು ಸಂಗೀತ ಪ್ರದರ್ಶನದೊಡನೆ ಹೋಲಿಸಿ ವರ್ಣಿಸಿದ್ದಾನೆ.

"ಷಟ್ಪಾದ ತಂತ್ರೀ ಮಧುರಾಭಿಧಾನಂ
ಪ್ಲವಂಗ ಮೋದೀರಿತ ಕಂಠತಾಲಂ
ಆವಿಷ್ಕೃತಂ ಮೇಘ ಮೃದಂಗ ನಾದೈ
ರ್ವನೇಷು ಸಂಗೀತ ಮಿವ ಪ್ರವೃತ್ತಂ
ಕ್ವಚಿತ್ ಪ್ರನೃತ್ತೈಃ ಕ್ವಚಿದುನ್ನದದ್ಭಿಃ
ಕ್ವಚಿಚ್ಚ ವೃಕ್ಷಾಗ್ರ ನಿಷಣ್ಣ ಕಾಯೈಃ
ವ್ಯಾಲಂಬ ಬರ್ಹಾಭರಣೈರ್ಮಯೂರೈ
ರ್ವನೇಷು ಸಂಗೀತ ಮಿವ ಪ್ರವೃತ್ತಂ
(4–28–36, 37)

'ದುಂಬಿಗಳು ಶ್ರುತಿ ಹಿಡಿಯುತ್ತಿರುವಂತೆಯೂ ಮೇಘಗಳು ವಾದ್ಯಘೋಷ ಮಾಡುತ್ತಿರುವಂತೆಯೂ, ಆಭರಣಗಳಿಂದ ಅಲಂಕೃತವಾದಂತೆ ಗರಿಗೆದರಿದ ನವಿಲುಗಳು ನಾಟ್ಯ ಮಾಡುತ್ತಿರುವಂತೆ, ವನಚರಗಳು ಮಹಾ ಉಲ್ಲಾಸದಿಂದ ವಿವಿಧ ಆಕೃತಿಗಳಿಗೆ ಅನುರೂಪವಾದ ಧ್ವನಿ ವಿಶೇಷಗಳಿಂದ ಸತಾಳವಾಗಿ ಹಾಡುತ್ತಿರುವಂತೆಯೂ ಎಲ್ಲ ಸೇರಿ ಸಂಗಿತ ಪ್ರದರ್ಶನದಂತೆ ಇದೆ' ಎನ್ನುವುದರಿಂದ ಇವೆಲ್ಲವೂ ಸೇರಿದರೆ ಮಾತ್ರವೇ ಸಂಗೀತ ಎನ್ನುವುದೆಂಬ ಭಾವನೆಯನ್ನು ಸ್ಪಷ್ಟಗೊಳಿಸುತ್ತದೆ.

ಕಥಕಳಿಯಂತಹ ಪ್ರದರ್ಶನಗಳಲ್ಲಿ ಮೊದಲಲ್ಲಿ ಚಂಡವಾದ್ಯದಂತಹ ವಾದ್ಯಘೋಷದಿಂದ ಜನ

(24 ನೇ ಪುಟ ನೋಡಿ)

# ಯುವವಾಣಿ

# ಸದಾಶಿವೇಂದ್ರ ಸರಸ್ವತಿ

ಭುವನದ ಭಾಗ್ಯದಿಂದಲೋ ಎಂಬಂತೆ ಆಗಾಗ ಅವತರಿಸುವ ಪುಣ್ಯ ಪುರುಷರ ಪಾವನ ಪರಂಪರೆ ನಮ್ಮ ರಾಷ್ಟ್ರಕ್ಕೆ ಹೊಸದೇನೂ ಅಲ್ಲ. ಭಗವಂತನ ಆವಿರ್ಭಾವ ಎಂದು, ಎಲ್ಲಿ – ಯಾವ ರೂಪದಲ್ಲಾಗುತ್ತದೆಂಬುದನ್ನು ಬಲ್ಲವರಾರು? ಈ ರಾಷ್ಟ್ರದಲ್ಲಿ ಜ್ಞಾನಧಾರೆ ಬತ್ತಿಹೋಗಿಲ್ಲವೆಂಬುದಕ್ಕೆ ನಿದರ್ಶನಗಳು ಬೇಕಾದಷ್ಟಿವೆ.

18ನೇ ಶತಮಾನದ ಪ್ರಾರಂಭದಲ್ಲಿ ತಂಜಾವೂರು ಜಿಲ್ಲೆಯಲ್ಲಿ ಅನೇಕ ಮಹಾ ವ್ಯಕ್ತಿಗಳು ಜೀವಿಸಿದ್ದರು. 'ಜಾನಕೀ ಪರಿಣಯ'ವೆಂಬ ಸುಂದರವಾದ ನಾಟಕವನ್ನು ರಚಿಸಿದ ರಾಮಚಂದ್ರದೀಕ್ಷಿತ, 'ಆರ್ಯಾ ಶತಕ'ವೆಂಬ ಅದ್ವಿತೀಯ ಗ್ರಂಥ ರಚಿಸಿದ ವೆಂಕಟೇಶ ಅಧ್ವರಿ, ಪಾತಂಜಲ ಮಹಾ ಭಾಷ್ಯಕ್ಕೆ ವ್ಯಾಖ್ಯಾನ ಬರೆದ ಗೋಪಾಲ ಕೃಷ್ಣಶಾಸ್ತ್ರಿ ... ಮುಂತಾದ ವಿದ್ವಾಂಸರ ಸಹ ಪಾಠಿಯೂ, ಒಡನಾಡಿಯೂ ಆಗಿದ್ದ ಶ್ರೀ ಸದಾಶಿವೇಂದ್ರನ ತಂದೆ ತಾಯಿಗಳಾರೆಂಬುದು ಕಾಲಗರ್ಭದಲ್ಲಿ ಹುದುಗಿ ಹೋಗಿರುವ ಸಂಗತಿಯಾಗಿದೆ. ಜಗದ್ವ್ಯಾಪಾರದಿಂದ ಸಂಪೂರ್ಣ ವಿಮುಖನಾಗಿ, ಸನ್ಯಾಸ ಸ್ವೀಕರಿಸಿದ ನಂತರವೇ ಭಾರತೀಯರಿಗೆ ಸದಾಶಿವೇಂದ್ರನ ವಿಚಾರ ತಿಳಿದದ್ದು. ಅದುವರೆಗೂ ಬೂದಿಮುಚ್ಚಿದ ಕೆಂಡದಂತಿದ್ದ ಈ ಯೋಗಿ ಶ್ರೇಷ್ಠ, ನಮ್ಮ ದೇಶದ ಮಹಾನ್ ಸಾಧಕರ ಮಹಾನ್ ವಾಗ್ಗೇಯಕಾರರ, ಮಹಾನ್ ತಪಸ್ವಿಗಳ ಸಾಲಿನಲ್ಲಿ ಬೆಳಗುವ ಬೆಳಗುವ ಒಂದು ದೇದೀಪ್ಯಮಾನವಾದ ಮಾಣಿಕ್ಯವೆಂದರೆ ತಪ್ಪಲ್ಲ.

ಬ್ರಹ್ಮಸೂತ್ರ ವೃತ್ತಿ, ಯೋಗಸೂತ್ರ ವೃತ್ತಿ; ಸಿದ್ಧಾಂತಕಲ್ಪವಲ್ಲಿ ಮುಂತಾದ ಲೋಕೋತ್ತರ ಗ್ರಂಥಗಳ ಲೇಖಕನಾದ ಸದಾಶಿವೇಂದ್ರನ ಜನ್ಮ ಶ್ರೋತ್ರೀಯ ಕುಟುಂಬದಲ್ಲಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಆತನ ತಂದೆತಾಯಿಗಳು ದೈವ ಭಕ್ತರೂ, ಉದ್ದಾಮ ಪಂಡಿತರೂ ಆಗಿರಲೇಬೇಕು. ಆ ಕಾಲದ ಪ್ರಸಿದ್ಧ ಜ್ಞಾನಸಿದ್ಧಿಗಳಿಂದ ಶಿಕ್ಷಣ ನಡೆದಿರಬಹುದು ಈ ಪುಣ್ಯ ಜೀವ. ಆ ಕಾಲದ ಸುಸಂಸ್ಕೃತವಾದ ಬುದ್ಧಿ ಜೀವಿಗಳು ಈತನಿಗೆ ಪರಿಚಿತರೂ – ಸುಹೃನ್ಮಿತ್ರರೂ ಆಗಿರಲೇಬೇಕು. ಉತ್ತಮೋತ್ತಮ ಪರಿಸರದಲ್ಲಿ ಈತನು ಬೆಳೆದಿರಬೇಕು. ತನ್ನ ಸುತ್ತಣ ವಾತಾವರಣವನ್ನು ತನ್ನ ಪಾಂಡಿತ್ಯದಿಂದ ಸುರಭಿತಗೊಳಿಸುವ ಶಕ್ತಿ ಈತನಿಗಿತ್ತು. ಸದಾಶಿವೇಂದ್ರ ಗೀತೆಯಲ್ಲಿ ಹೇಳುವಂತೆ "ವಿವಿಕ್ತಸೇವಿ, ಪ್ರಶಾಂತಾತ್ಮ, ವಿಗತಭೀಃ" ಆಗಿದ್ದನೆಂಬುದಂತೂ ಸುಸ್ಪಷ್ಟ. ಸಾಂಗವಾಗಿ ವೇದಾಧ್ಯಯನ ಮಾಡಿ ತೇಜಸ್ವಿಯಾಗಿದ್ದ ಮಗನಿಗೊಂದು ಮದುವೆ ಮಾಡಬೇಕೆಂದು ತಂದೆ ತಂದೆ ತಾಯಿಗಳು ಯೋಚನೆ ಮಾಡಿರಲೂಬಹುದು. ಆದರೆ ಸದಾಶಿವೇಂದ್ರನ ಪ್ರವೃತ್ತಿ, ವೈರಾಗ್ಯದತ್ತ ಬಾಗಿತ್ತು. ಜಗತ್ತಿನ ಯಾವ ವಸ್ತುವೂ – ವ್ಯಕ್ತಿಯೂ, ಲಾವಣ್ಯವೂ ಆತನನ್ನು ಆಕರ್ಷಿಸುವುದರಲ್ಲಿ ಸಫಲವಾಗಲು ಸಾಧ್ಯವೇ ಇರಲಿಲ್ಲ. ಆದರೆ ಮಗನ ಅಭ್ಯುದಯವನ್ನು ಬಯಸುವ ತಂದೆ ತಾಯಿಗಳು ಸುಮ್ಮನಿದ್ದಾರೇನು!! ಯಾರೋ ಒಬ್ಬ ಕುಲೀನ ಕನ್ಯೆಯನ್ನು ಹುಡುಕಿ ತಂದು ಗಂಟು ಹಾಕೇ ಹಾಕಿದರು; ಧನ್ಯರಾದೆವೆಂದುಕೊಂಡರು, ಕೃತಕೃತ್ಯರಾದೆವೆಂದು ಭಾವಿಸಿದರು!!

ಬಾಲ್ಯ ವಿವಾಹ ಪದ್ಧತಿಯು ಬಳಕೆಯಲ್ಲಿದ್ದ ಆ ಕಾಲದಲ್ಲಿ, ಹೆಣ್ಣು ತನ್ನ ಗಂಡನ ಮನೆಗೆ ಸಂಸಾರಕ್ಕೆ ಬರುವುದಕ್ಕೆ ಸಾಕಷ್ಟು ಕಾಲಾವಕಾಶವಿರುತ್ತಿತ್ತು. ಈ ಕಾಲಾವಕಾಶ, ಸದಾಶಿವೇಂದ್ರನಿಗೊಂದು ವರವಾಯ್ತು. ಆತನನ್ನು ಮದುವೆಯಾದ ಕನ್ಯೆಗೊಂದು ಶಾಪವಾಯ್ತು!! ಒಂದು ವ್ಯಕ್ತಿಯ ಬಾಳಿನಲ್ಲಿ ಪರಿವರ್ತನೆಯ ಮುಹೂರ್ತ ಹೇಗೆ ಬರುತ್ತದೆ, ಎಂದು ಬರುತ್ತದೆ– ಎಂಬುದು ದೈವಸಂಕಲ್ಪಕ್ಕೆ ಬಿಟ್ಟ ವಿಚಾರ, ಏನೊಂದು ದಿವ್ಯ ಯೋಜನೆ. ಇದಕ್ಕೆ ಯಾರೂ ಹೊರತಲ್ಲ. ಒಂದು ದಿನ ಸದಾಶಿವೇಂದ್ರ ಇದ್ದಕ್ಕಿದ್ದಂತೆ ಮನೆಬಿಟ್ಟು ಹೊರಟು ಹೋದ. ಎಲ್ಲಿಗೆ? ವಿಧಿ ಎಳೆದ ಕಡೆಗೆ!! ತಂದೆ ತಾಯಿಗಳು ಹುಡುಕಿ ಹುಡುಕಿ ಹಣ್ಣಾದರು, ಅತ್ತು ಗೋಳಾಡಿದರು; ಕೊನೆಗೊಂದು ದಿನ ಈ ಜಗತ್ತನ್ನು ಬಿಟ್ಟು ಹೊರಟು ಹೋದರು.

'ದಹರವಿದ್ಯಾಪ್ರಕಾಶಿಕಾ' 'ಉತ್ತರ ಗೀತಾ ವ್ಯಾಖ್ಯಾನ ... ಮುಂತಾದ ಗ್ರಂಥಗಳನ್ನು ಜಗತ್ತಿಗೆ ಅನುಗ್ರಹಮಾಡಿರುವ ಪರಮ ಶಿವೇಂದ್ರ ಸರಸ್ವತಿಗಳ ಕೃಪಾಶೀರ್ವಾದ ಬಲದಿಂದ ಸದಾಶಿವೇಂದ್ರರಿಗೆ ಸನ್ಯಾಸ ದೀಕ್ಷೆ ದೊರೆಯಿತು. ಕ್ರಮಬದ್ಧವಾಗಿ ವೇದಾಂತಗ್ರಂಥಗಳ ಅಧ್ಯಯನ ಮಾಡಿದ್ದ ಈ ತೇಜಸ್ವಿ ಯೋಗಾಭ್ಯಾಸ ನಿರತನಾಗಿ ಮಹತ್ತರ ಸಿದ್ಧಿ ಪಡೆದಿದ್ದರು. ಈತ ತನ್ನ ಗುರುಗಳ ದರ್ಶನಕ್ಕಾಗಿ ಬರುತ್ತಿದ್ದವರೊಡನೆ ಆಗಾಗ ಶಾಸ್ತ್ರಚರ್ಚೆ ಮಾಡುತ್ತಿದ್ದುದುಂಟು. ಈತನ ವಾದಸರಣಿ ಹರಿತವಾಗಿತ್ತು. 'ನಿನ್ನ ನಾಲಿಗೆಯ ಹರಿತವನ್ನು ಹಿಡಿತದಲ್ಲಿಟ್ಟುಕೊಳ್ಳುವುದೆಂದು' – ಎಂದು ಗುರುಗಳು ಹೇಳಿದಾಗ, ಸದಾಶಿವ ಹೇಳಿದನಂತೆ 'ಪ್ರತಿಕಕ್ಷಿಗಳು ಯಾರೂ ಇಲ್ಲದಾಗ' – ಎಂದು. ಕಾಕತಾಳೀಯ ನ್ಯಾಯದಂತೆ ಅಂದಿನಿಂದ ಆತನನ್ನು ಯಾರೂ ಕೆಣಕಿ ಮಾತಾಡಲೂ ಇಲ್ಲ; ಸೆಣಸಿ ನಿಂತವರೂ ಇಲ್ಲ. ಇದು ಆತನ ಯೋಗಾಭ್ಯಾಸಕ್ಕೆ – ಮೌನಕ್ಕೆ – ತುಂಬ ಸಹಕಾರಿಯಾಯ್ತು. ಕೆಲವೇ ದಿನಗಳಲ್ಲಿ

ವಿದ್ವಾನ್ ಬ. ನ. ಗುಂಡೂರಾವ್

ಪರಮಸಿದ್ಧಿ ಪಡೆದ ಸದಾಶಿವೇಂದ್ರ, 'ಆತ್ಮವಿದ್ಯಾವಿಲಾಸವೆಂಬ' ಗ್ರಂಥದಲ್ಲಿ ತನ್ನ ಅನುಭವವನ್ನು ಈ ರೀತಿ ಹೇಳಿದ್ದಾನೆ -

ಸನ್ತ್ಯಜ್ಯ ಶಾಸ್ತ್ರಜಾಲಂ
ಸಂ ವ್ಯವಹಾರಂ ಚ ಸರ್ವತಸ್ತ್ಯಕ್ತ್ವಾ ।
ಆಶ್ರಿತ್ಯಪೂರ್ಣ ಪದವೀಮಾಸ್ತೇ
ನಿಷ್ಕಂಪ ದೀಪವದ್ಯೋಗೀ ॥

ಪರಮ ಯೋಗೀಂದ್ರನಾದ ಈತ, ಆತ್ಮ ಸಾಕ್ಷಾತ್ಕಾರ ಪಡೆದಮೇಲೆ, ದೇಹದ ಪರಿವೆಯೇ ಇಲ್ಲದೆ, ಲೋಕದ ಪರಿವೆಯೇ ಇಲ್ಲದೆ ಅಲೆದಾಡುವ, ದಿಗಂಬರ ಅವಧೂತನಾದ- ಅನೇಕದಿನಗಳ ನಂತರ ಶಿಷ್ಯನ ಈ ಸ್ಥಿತಿ ತಿಳಿದು ಬಂದಾಗ, ಗುರುಗಳಾದ ಪರಮ ಶಿವೇಂದ್ರರು "ಆ ಪುಣ್ಯ ಪಡೆಯಲು ನನಗೆ ಹತ್ತು ಜನ್ಮಗಳು ಬೇಕೆಂದು ಕಾಣುತ್ತದೆ"- ಎಂದರಂತೆ. ಅವಧೂತ ಸದಾಶಿವೇಂದ್ರ ದ್ವಂದ್ವಾತೀತನಾಗಿದ್ದ, ಹಗಲು ರಾತ್ರಿಗಳಾಗಲೀ, ಹಸಿವು ನೀರಡಿಕೆಗಳಾಗಲೀ, ಶೀತೋಷ್ಣಗಳಾಗಲೀ, ಸುಖದುಃಖಗಳಾಗಲೀ ಆತನಮೇಲೆ ಪರಿಣಾಮಮಾಡುತ್ತಿರಲಿಲ್ಲ. ಮನಸ್ಸಿನಿಂದ, ಬುದ್ಧಿಯಿಂದ ಅತೀತನಾಗಿದ್ದುದರಿಂದ, ಅವುಗಳ ಚಿತ್ರವಿಚಿತ್ರ ಸಂಚಾರಗತಿಗಳನ್ನು ಆತ ಕಾಣಬಲ್ಲವನಾಗಿದ್ದ. ಆತನ ಬಾಳಿನಲ್ಲಿ ತುಂಬ ಪರಿಣಾಮ ಬೀರಿದ ಒಂದು ಘಟನೆಯನ್ನು ಉದಾಹರಿಸುವುದು ಅಪ್ರಾಸಂಗಿಕವಾಗಲಾರದು.

ಒಂದು ದಿನ ಕಾವೇರಿತೀರದಲ್ಲಿ ಮರಳನ್ನು ರಾಶಿಮಾಡಿ, ಅದನ್ನೇ ತಲೆದಿಂಬಾಗಿ ಮಾಡಿಕೊಂಡು ಈ ಯೋಗಿಶ್ರೇಷ್ಠ ಮೈಮರೆತು ಮಲಗಿದ್ದನಂತೆ. ನೀರಿಗಾಗಿ ಬಂದ ಕೆಲವು ಸ್ತ್ರೀಯರು ಹಾಸ್ಯಮಾಡಿ ಪರಸ್ಪರ ಮಾತಾಡಿಕೊಂಡರಂತೆ. ಎಲ್ಲವನ್ನು ಬಿಟ್ಟೆನೆಂದು ಹೇಳಿಕೊಳ್ಳುವ ಈ ಸನ್ಯಾಸಿಗೊಂದು ತಲೆದಿಂಬು ಬೇಕಾಯ್ತೇನೋ! ಮರಳಾದರೂ ಚಿಂತೆಯಿಲ್ಲವೆಂದು ಅದನ್ನೇ ದಿಂಬುಮಾಡಿಕೊಂಡಿದ್ದಾನೆ' ಎಂದು. ದೇಹ ಮಲಗಿದ್ದರೂ ದಿವ್ಯಪ್ರಜ್ಞೆ ಪ್ರಜ್ವಲಿತವಾಗೇ ಇತ್ತು. ಈ ಮಾತುಗಳೆಲ್ಲ ಸದಾಶಿವೇಂದ್ರನಿಗೆ ಕೇಳಿಸಿತು. ಮರಳದಿಂಬನ್ನೆತ್ತಿ ತಳ್ಳಿಹಾಕಿ ಮಲಗಿದ. ನೀರ ಕೊಡಗಳನ್ನು ಹೊತ್ತು ಅದೇ ದಾರಿಯಲ್ಲಿ ಬಂದ ಸ್ತ್ರೀಯರು ಪುನಃ ಇದನ್ನು ಗಮನಿಸಿದರು. "ನಮ್ಮ ಮಾತು ಈತನಮೇಲೆ ಪರಿಣಾಮಮಾಡಿದೆ"— ಎಂದುಕೊಂಡರು. ಯೋಗಿಯ ಮನಸ್ಸಿನ ಮೇಲೆ ಪ್ರಶಂಸೆಯಾಗಲೀ, ಆಕ್ಷೇಪಣೆಯಾಗಲೀ ಪರಿಣಾಮ ಮಾಡಬಹುದೇ ? ಎಂದು ಸದಾಶಿವೇಂದ್ರ ಕ್ಷಣಕಾಲ ಯೋಚಿಸಿದ. ಆಗ ಆತನ ಬಾಯಿಂದ ಒಂದು ಶ್ಲೋಕರತ್ನ ಹೊರಹೊಮ್ಮಿತು:

ಪಶ್ಯತಿ ಕಿಮಪಿ ನ ರೂಪಂ
ವದತಿ ನ ಶೃಣೋತಿ ಕಿಂಚಿದಪಿ ವಚನಂ
ತಿಷ್ಠತಿ ನಿರುಪಮಭೂಮ್ನಿ
ನಿಷ್ಠಾಮವಲಂಬ್ಯ ಕಾಷ್ಠವದ್ಯೋಗೀ ॥

ನಿಜ ಯೋಗಿಯಾದವನಿಗೆ ಆತ್ಮದರ್ಶನದ ವಿನಃ ಮತ್ತೇನೂ ಕಾಣಬಾರದು; ಕಾಣುವುದೂ ಇಲ್ಲ. ಜಗತ್ತಿನ ಸ್ತುತಿನಿಂದೆಗಳು ಕೇಳಿಸಲೂ ಬಾರದು. ಪರಿಣಾಮ ಮಾಡಲೂ ಬಾರದು.

ಈ ಅವಧೂತ, ಒಂದು ದಿನ ಒಬ್ಬ ಮುಸಲ್ಮಾನ ಶ್ರೀಮಂತನ ಮನೆಯೊಳಕ್ಕೆ ಮಿಂಚಿನಂತೆ ನುಗ್ಗಿದ. ಈ ಪುಣ್ಯ ಜೀವಿಯ ಆಗಮನವನ್ನು ಅಸಭ್ಯವರ್ತನೆಯೆಂದು ಭಾವಿಸಿ ಕುಪಿತನಾದ, ಆ ಶ್ರೀಮಂತ ಮುಸಲ್ಮಾನ, ತನ್ನ ಆಯುಧ

ದಿಂದ ಆತನ ಕೈ ಕತ್ತರಿಸಿ ಹಾಕಿದ. ಸದಾಶಿವೇಂದ್ರ ಈ ಆಘಾತವನ್ನು ಸ್ವಲ್ಪವೂ ಗಮನಿಸಲಿಲ್ಲ. ನಗುತ್ತ ಹೊರಟುಹೋದ. ಕಡಿದುಬಿದ್ದ ತೋಳನ್ನು ತನ್ನ ಕೈಲಿ ಹಿಡಿದು ಆ ಮುಸಲ್ಮಾನ ಚಕಿತನಾಗಿ ಹೋದ-ಯೋಗೀಂದ್ರನ ಹಿಂದೆ ಓಡಿದ. ತನ್ನ ಅಪರಾಧಕ್ಕೆ ಕ್ಷಮಾಪಣೆ ಕೇಳಬೇಕೆಂದು. ಉನ್ಮತ್ತನಂತೆ ಓಡುತ್ತಿದ್ದ ಸದಾಶಿವೇಂದ್ರ ಒಂದು ಕಾಡಿನೊಳಕ್ಕೆ ನುಗ್ಗಿ ಒಂದು ಮರದ ಕೆಳಗೆ ಕೂತು. ವಿಶಾಲಗಗನವನ್ನು ದಿಟ್ಟಿಸಿ ನೋಡುತ್ತಿದ್ದ, ಅದಾವ ದಿವ್ಯ ದರ್ಶನ ಆತನಿಗೆ ಕಾಣಿಸುತ್ತಿತ್ತೋ!! ಮುಸಲ್ಮಾನ ಶ್ರೀಮಂತ ಕಂಬನಿಸುರಿಸುತ್ತ ಬಂದ. ಆತನ ಕಾಲಮೇಲೆ ದಿಂಡುರುಳಿಬಿದ್ದ. ಕ್ಷಮಿಸಬೇಕೆಂದು ಬೇಡಿಕೊಂಡ. ಯೋಗೀಂದ್ರ ನಗುತ್ತ, ಕತ್ತರಿಸಿ ಹೋಗಿದ್ದ ಆ ತೋಳನ್ನು ಒಮ್ಮೆ ಹಾಗೆ ನೋಡಿದ ಅದನ್ನು ಆ ಮರದ ರೆಂಬೆಯ ಮೇಲಿಟ್ಟು ಕಾಡಿನೊಳಕ್ಕೆ ಹೊರಟುಹೋದ. ಹಿಂಬಾಲಿಸಿದ ಶ್ರೀಮಂತ ಈ ಮಹಾತ್ಮನ ವರ್ತನೆಯನ್ನು ಕಂಡು ಬೆರಗಾದ. ತನ್ನ ಆತುರದ ಕಾರ್ಯಕ್ಕೆ ತುಂಬ ಮರುಗಿದ, ಉದ್ಧರಿಸಬೇಕೆಂದು ಕಾಲಿಗೆ ಬಿದ್ದ. ಯೋಗೀಂದ್ರ ನಗುತ್ತ ನೆಲದಮೇಲೆ ಒಂದು ವಾಕ್ಯ ಬರೆದ "ಬಯಸಿದ್ದನ್ನು ತಕ್ಷಣಮಾಡುವುದರಿಂದ, ಮಾಡಲೇಬೇಕಾದ ಒಳ್ಳೆಕಾರ್ಯವನ್ನು ಮಾಡುವ ಅವಕಾಶ ಸಾಧಾರಣವಾಗಿ ತಪ್ಪಿ ಹೋಗುತ್ತದೆ." ಈ ಒಂದು ಉಪದೇಶದಿಂದ ಆ ಶ್ರೀಮಂತನಲ್ಲಿ ತುಂಬ ಪರಿವರ್ತನೆಯುಂಟಾಯ್ತು. ಆ ಜೀವ. ಜಗತ್ತಿನ ಕ್ಷುದ್ರಭೂಮಿಯನ್ನು ಬಿಟ್ಟು ಮೇಲೇರಿ ಹೋಯ್ತು. ಮಹಾತ್ಮರ ಸಂಸರ್ಗವೇ ಹಾಗೆ. ಅವರ ಒಂದು ಮಾತೇ ಸಾಕು ಜಗತ್ತಿಗೆ ದಾರಿದೀಪವಾಗುತ್ತದೆ, ಜ್ಞಾನಾಂಜನದಿಂದ ಅಜ್ಞಾನ ತಿಮಿರವನ್ನು ದೂರಮಾಡುತ್ತದೆ.

ಒಬ್ಬ ಅಧಿಕಾರಿ ಕೆಲವು ವಸ್ತುಗಳನ್ನು ಸ್ಥಳಾಂತರಿಸಬೇಕಾಗಿತ್ತು. ಭಾರ ಹೊರಲು ಸಾಕಷ್ಟು ಜನರಿರಲಿಲ್ಲ. ಆ ಸಮಯಕ್ಕೆ ಅಲ್ಲಿ ಬಂದ ಈ ವಿಚಿತ್ರವ್ಯಕ್ತಿಯನ್ನು ಭಾರ ಹೊರಲು ನೇಮಿಸಲಾಯ್ತು. ಹತ್ತಾರು ಜನರ ಜತೆಯಲ್ಲಿ ಈ ಯೋಗೀಂದ್ರನು ಭಾರ

ಹೊತ್ತು ಹೊರಟ. ಎಲ್ಲರೂ ತಂತಮ್ಮ ತಲೆಯಮೇಲಿದ್ದ ವಸ್ತುಗಳನ್ನು ನಿರ್ದಿಷ್ಟ ಸ್ಥಳದಲ್ಲಿ ಇಳಿಸಿದರು ಅದರೆ ಸದಾಶಿವೇಂದ್ರ ಹಾಗೇ ನಿಂತಿದ್ದ ಭಾರಹೊತ್ತುಕೊಂಡು. ಅಧಿಕಾರಿ 'ಅದನ್ನಲ್ಲಿಳಿಸು' ಎಂದು ಗದರಿಸಿ ಆಜ್ಞಾಪಿಸುತ್ತ ಅಲ್ಲಿದ್ದ ರಾಶಿರಾಶಿ ವಸ್ತುಗಳಮೇಲೆ ತನ್ನ ತಲೆ ಮೇಲಿದ್ದ ಭಾರವನ್ನು ಇಳಿಸಿಟ್ಟ. ಮರುಕ್ಷಣದಲ್ಲೇ ಧಗ್ಗನೆ ಬೆಂಕಿ ಹೊತ್ತಿಕೊಂಡು ಎಲ್ಲವೂ ಸುಟ್ಟುಹೋಯಿತು!!

ಕ್ರಿ. ಶ. 1730–1769 ರಲ್ಲಿ ಪುದುಕೋಟೆ ಸಂಸ್ಥಾನವನ್ನಾಳಿದ ವಿಜಯ ರಘುನಾಥ ತೊಂಡಮಾನ್ ಸುಪ್ರಸಿದ್ಧ ಆಡಳಿತಗಾರ. ಈತನಿಗೆ ಯೋಗೀಂದ್ರರ ಬಗ್ಗೆ ಅಪಾರ ಗೌರವ, ಪೂಜ್ಯಭಾವ. ತಿರುಚನಾಪಳ್ಳಿ ಜಿಲ್ಲೆಯ ಕ್ಷಿನ ನೆರೂರು ಎಂಬಲ್ಲಿ ಸದಾಶಿವೇಂದ್ರ ತನ್ನ ಕೊನೆಯ ದಿನಗಳನ್ನು ಕಳೆದದ್ದು ಒಂದು ವಿಚಿತ್ರ ಸಂಗತಿ. ಈ ಮಹಾಯೋಗಿ ಹೇಳಿದರಂತೆ– "ಮುಂಬರುವ ಶುಕ್ಲಪಕ್ಷದ ದಶಮಿ ನಾನು ಈ ಜಗತ್ತನ್ನು ಬಿಟ್ಟು ಹೋಗುವುದೆಂದು ನಿರ್ಣಯ ಮಾಡಿಕೊಂಡಿದ್ದೇನೆ. ಕಾಶಿಯಿಂದ ಆ ವೇಳೆಗೆ ಬರುವ ಶಿವಲಿಂಗವನ್ನು ನನ್ನ ಸಮಾಧಿಯ ಮೇಲಿಟ್ಟುಬಿಡಿ. ಯೋಗೀಂದ್ರನ ಮಾತು ಅಕ್ಷರಶಃ ಸತ್ಯವಾಯಿತು. ಸಮಾಧಿಯಮೇಲೆ ಆ ಶಿವಲಿಂಗವೀಗಲೂ ಪೂಜಿಸಲ್ಪಡುತ್ತಿದೆ.

ಈ ಮಹಾಯೋಗಿಯ ವಿಷಯದಲ್ಲಿ, ಪರಮಪೂಜ್ಯರೂ ಪರಮಹಂಸ ಪರಿವ್ರಾಜಕರೂ ಶೃಂಗೇರಿ ಶಾರದಾ ಪೀಠದ ಗುರುವರೇಣ್ಯರೂ ಆಗಿದ್ದ ಶ್ರೀಶ್ರೀ ಚಂದ್ರಶೇಖರ ಸರಸ್ವತೀಸ್ವಾಮಿಗಳವರು– "ಸದಾಶಿವೇಂದ್ರಸ್ತುತಿ"– ಎಂಬ ದಿವ್ಯ ಗ್ರಂಥವನ್ನು ರಚಿಸಿದ್ದಾರೆ. ಕ್ರಿ.ಶ. 1908 ರಲ್ಲಿ ಗುರುಗಳು ಯೋಗೀಂದ್ರರ ಸಮಾಧಿಯನ್ನು ಸಂದರ್ಶಿಸಿದಾಗ, ಭಕ್ತಿ ಪರವಶರಾಗಿ ಹಾಡಿದ ಶ್ಲೋಕರತ್ನಗಳೇ 'ಸದಾಶಿವೇಂದ್ರಸ್ತುತಿ'. ಗುರುಗಳು ಈ ಯೋಗೀಂದ್ರರ ಚಿತ್ರಪಟ್ಟ ಸದಾ ತಮ್ಮ ಬಳಿ–ಪರಮಪೂಜ್ಯ ವಸ್ತುವಾಗಿರಿಸಿಕೊಂಡಿದ್ದರು.

ಸದಾಶಿವೇಂದ್ರರ ಹೆಸರು ಕರ್ನಾಟಕ ಸಂಗೀತ ಪ್ರಪಂಚದಲ್ಲಿ ಚಿರಸ್ಥಾಯಿಯಾಗಿರುತ್ತದೆ. ಅವರು ರಚಿಸಿರುವ ಅಮೂಲ್ಯ ಕೃತಿರತ್ನಗಳೇ ಕಾರಣವೆಂದು. 'ಚಿಂತಾ ನಾಸ್ತಿ ಕಿಲ ತೇಷಾಂ', 'ಭಜರೇಗೋಪಾಲಂ, ಪಿಬರೇ ರಾಮರಸಂ' 'ಗಾಯತಿವನಮಾಲೀ,' ಬ್ರೂಹಿ ಮುಕುಂದೇತಿ .. . ಇತ್ಯಾದಿ ನೂರಾರು ಕೀರ್ತನೆಗಳು ಭಕ್ತಿಭಾವ ಜಲಧಿಯ ಲೋಲಲಹರಿಗಳಂತೆ ಸಂಗೀತ ಪ್ರಪಂಚದಲ್ಲಿ ಪ್ರಸಿದ್ಧವಾಗಿವೆ

ತದ್ವಿಜ್ಞಾನಾರ್ಥಂ ಗುರುಮೇವಾಭಿಗಚ್ಛೇತ್ — ಎನ್ನುತ್ತದೆ ಮುಂಡಕೋಪನಿಷತ್ತು. ಇಂತಹ ಗುರುವರೇಣ್ಯರಾದ ಶ್ರೀ ಸದಾಶಿವೇಂದ್ರ ಸರಸ್ವತಿಗಳ ಪುಣ್ಯ ಸ್ಮರಣೆಯೇ ಒಂದು ಜ್ಞಾನಸ್ನಾನವೆಂಬುದು ನಿರ್ವಿವಾದ ಸಂಗತಿ.

—

( 20ನೇ ಪುಟದಿಂದ )

ರನ್ನು ಆಕರ್ಷಿಸುತ್ತಾರೆ. ನಮ್ಮ ಬೀದಿನಾಟಕಗಗಲ್ಲೂ ದೊಡ್ಡ ದೊಡ್ಡ ಮದ್ದಳೆ ಬಾರಿಸಿ ನಾಟಕ ಪ್ರದರ್ಶನವಾಗುವುದೆಂಬುದನ್ನು ಸೂಚಿಸುತ್ತಾರೆ. ಮೇಲಿನ ವರ್ಷಕಾಲ ವರ್ಣನೆಯಲ್ಲೂ ಸಹ ವಾಲ್ಮೀಕಿ ಈ ವಿಷಯವನ್ನು ನೆನಪಿಗೆ ತರುತ್ತಾನೆ.

ಸ್ವನೈರ್ಘನಾನಾಂ ಪ್ಲವಗಾಃ ಪ್ರಬುದ್ಧಾ
ವಿಹಾಯ ನಿದ್ರಾಂ ಚಿರಸನ್ನಿರುದ್ಧಾಂ
ಅನೇಕ ರೂಪಾಕೃತಿವರ್ಣನಾದಾ
ನವಾಂಬುಧಾರಾಭಿಹತಾ ನದಂತಿ
(4–28–38)

ರಾತ್ರಿಯೆಲ್ಲವೂ ಆ ದರ್ಶನಕ್ಕಾಗಿ ನಿದ್ದೆಗೆಟ್ಟು, ಕೋಲಾಹಲದಿಂದ ಬಂದು ಸೇರಿ ಆನಂದಿಸುವ ಪ್ರಜಾನಿಕರದಂತೆಯೇ ವಾನರ ಸಮೂಹವೆಲ್ಲಾ ಆ ವರ್ಷಕಾಲ ಸಂಗೀತವನ್ನು ಮೇಘ ಘೋಷದಿಂದ ಗಮನಿಸಿ, ಮಳೆಯಲ್ಲಿ ಬಂದು ಆನಂದಿಸತೊಡಗಿತೆಂದು ಹೇಳುವುದರಿಂದಾಗಿ ಈ ಸಂಪ್ರದಾಯ ಎಷ್ಟು ಪ್ರಾಚೀನವಾದದ್ದು ಎಂಬುದು ತಿಳಿಯುತ್ತದೆ. ಇದನ್ನೇ ನಂತರದಲ್ಲಿ ಭರತನ ನಾಟ್ಯಶಾಸ್ತ್ರವೂ ಅನುವರ್ತಿಸಿ ನಾಂದೀ ಪ್ರಸ್ತಾವನೆಯಲ್ಲಿ ವಿವರವಾಗಿ ವರ್ಣಿಸಿದೆ.

★

# "ತೃಣಮಂತರತಃಕೃತ್ವಾ"

ಮೇಲಿನ ಮಾತು ಶ್ರೀಮದ್ರಾಮಾಯಣದ ಸುಂದರಕಾಂಡದಲ್ಲಿ ಬರುತ್ತದೆ. ಈ ವಾಕ್ಯವಿರುವ ಪೂರ್ತಿ ಶ್ಲೋಕ ಹೀಗಿದೆ.

ತೃಣಮಂತರತಃ ಕೃತ್ವಾ
ಪ್ರತ್ಯುವಾಚ ಶುಚಿ ಸ್ಮಿತಾ ।
ನಿವರ್ತಯ ಮನೋಮತ್ತಃ
ಸ್ವಜನೇಪ್ರೇಯ ತಾಂ ಮನಃ ॥

ರಾವಣನು ಸೀತಾದೇವಿಯನ್ನು ಅಪಹರಿಸಿ ಅಶೋಕವನದಲ್ಲಿಟ್ಟಿದ್ದಾನೆ. ಕೆಲವು ದಿನಗಳಾದ ಮೇಲೆ ಅವಳ ಬಳಿಗೆ ಬಂದು, ಅವಳಿಗೆ ಆಸೆ ಹುಟ್ಟಿಸುವ ಕೆಲವು ಮಾತುಗಳನ್ನು ಹೇಳುವನು. ಭಾರ್ಯೆಯಾಗು ಎಂದು ತಿಳಿಸುವನು. ಭಾ+ಆರ್ಯೆ ಎಂದರೆ ನಿನ್ನ ತೇಜಸ್ಸಿನಿಂದ ಪೂಜ್ಯಳಾಗು ಎಂದು ಅದರ ಅಂತರಾರ್ಥ. ಹೀಗೆ ಅವನು ಹೇಳುವ ಮಾತುಗಳಿಗೆಲ್ಲಾ ಅಂತರಾರ್ಥಗಳಿವೆ, ಆದರೆ ಸಾಮಾನ್ಯವಾಗಿ ಮೇಲು ನೋಟಕ್ಕೆ ಕಾಮುವಶನಾದವನು ಹೇಳುವಂತೆ ತೋರುತ್ತವೆ.

ರಾವಣನ ಮಾತುಗಳೆಲ್ಲವನ್ನು ಕೇಳಿ ಸೀತೆಗೆ ದುಃಖವಾಗುವುದು ಆದರೆ ಉತ್ತರ ಹೇಳಲೇ ಬೇಕಷ್ಟೆ. ಆಗ ಅವಳು ತನಗೂ ರಾವಣನಿಗೂ ಮಧ್ಯೆ ಬಂದು ಹುಲ್ಲುಕಡ್ಡಿಯನ್ನಿಟ್ಟು ಬುದ್ಧಿವಾದ ಸೂಚಕವಾದ ಕೆಲವು ಮಾತುಗಳನ್ನು ರಾಕ್ಷಸ ರಾಜನಿಗೆ ತಿಳಿಸುವಳು. ಹುಲ್ಲನ್ನು ಇಟ್ಟು ಮುಗುಳು ನಗುತ್ತ ಕೆಲವು ಮಾತುಗಳನ್ನಾಡಿದಳು ಎಂಬುದಕ್ಕೆ ಅನೇಕ ಭಾವಾರ್ಥಗಳಿವೆ.

ನೀಚನಾದ ರಾವಣನು ತನ್ನ ಸಮೀಪಕ್ಕೆ ಬರಬಾರದೆಂದು ಮಧ್ಯೆ ಹುಲ್ಲನ್ನಿಟ್ಟಳು. ಎದುರಿಗೆ ನಿಂತಿದ್ದ ರಾಕ್ಷಸಾಧಮನನ್ನು ಕಂಡು ಅಸಹ್ಯಪಟ್ಟು ಅವನು ಹುಲ್ಲಿಗೆ ಸಮಾನ ಎಂದು ತೋರಿಸುವುದಕ್ಕಾಗಿ ಹುಲ್ಲುಕಡ್ಡಿಯನ್ನಿಟ್ಟಳು. ರಾವಣನ ಮುಖ ನೋಡಿ ಉತ್ತರ ಕೊಟ್ಟರೆ, ತನ್ನ ಕೃಪಾ ಕಟಾಕ್ಷದಿಂದ ಅವನಿಗೆ ಒಳ್ಳೆಯ ಬುದ್ಧಿ ಹುಟ್ಟಿದರೆ, ದುಷ್ಟ ಶಿಕ್ಷಣಕ್ಕೆ ಎಲ್ಲಿ ಭಂಗಬರುವುದೋ ಎಂದು ತಿಳಿದು ಹುಲ್ಲನ್ನು ನೋಡುತ್ತ ಉತ್ತರ ಕೊಟ್ಟಳು. ಅಥವ ಪತಿವ್ರತಾ ಸ್ತ್ರೀಯರು ಪರಪುರುಷರೊಡನೆ ಮಾತನಾಡುವುದು ಶಾಸ್ತ್ರನಿಷಿದ್ಧ ಎಂಬುದನ್ನು ತೋರಿಸುವುದಕ್ಕಾಗಿ, ಮಧ್ಯೆ ಹುಲ್ಲಿನ ಕಡ್ಡಿಯಿಟ್ಟು ಮಾತನಾಡಿದಳು. ಕಾಮದಿಂದ ಅಜ್ಞಾನಾದ ರಾವಣನಿಗೆ "ಜ್ಞಾನೇನ ಹೀನಃ ಪಶುಭಿಃ ಸಮಾನಃ" ಎಂಬ ನ್ಯಾಯದಂತೆ ಪಶುಸಮಾನನಾದ ರಾಕ್ಷಸನಿಗೆ ತೃಣವೇ ಆಧಾರ ಎಂದು ವ್ಯಕ್ತಪಡಿಸುವುದಕ್ಕಾಗಿ ಹುಲ್ಲನ್ನಿಟ್ಟಳು.

ರಾವಣನು ಸೀತೆಗೆ ಅಪಾರ ವಸ್ತ್ರಾಭರಣ ಕೊಡುವುದಾಗಿ ಹೇಳಿದುದಕ್ಕೆ ಪ್ರತ್ಯುತ್ತರವಾಗಿ ಅವೆಲ್ಲವೂ ಹುಲ್ಲಿಗಿಂತ ಕಡೆ ಎಂದು ತಿಳಿಸುವುದಕ್ಕಾಗಿ ಹುಲ್ಲುಕಡ್ಡಿಯನ್ನಿಟ್ಟಳು. ರಾವಣನ ಅಪರಾಧದಿಂದ ರತ್ನಸಮೃದ್ಧವಾದ ಲಂಕೆಯು ಶೀಘ್ರದಲ್ಲಿ ನಾಶವಾಗಿ ಹುಲ್ಲುಕಡ್ಡಿಗೆ ಸಮಾನವಾಗುವುದೆಂಬುದನ್ನು ಸೂಚಿಸುವುದಕ್ಕಾಗಿ ಹುಲ್ಲನ್ನಿಟ್ಟಳು ರಾಕ್ಷಸನು ಮಾಡಿರುವ ಮಹಾಪರಾಧ ಕ್ಷಮೆಗಾಗಿ ಮತ್ತೂ ತನ್ನ ಪ್ರಾಣರಕ್ಷಿಸಿಕೊಳ್ಳುವುದಕ್ಕಾಗಿ, ಬಾಯಲ್ಲಿ ಹುಲ್ಲುಕಡ್ಡಿ ಕಚ್ಚಿಕೊಂಡು ಶ್ರೀರಾಮನಲ್ಲಿ ಶರಣಾಗತಿ ಹೊಂದು ಎಂಬುದನ್ನು ಸೂಚಿಸುವುದಕ್ಕಾಗಿ ಹುಲ್ಲು ಇಟ್ಟಳು. 'ಹೇ! ರಾವಣಾ! ಪರಮಾತ್ಮನು ವಾಮನನಾಗಿ ಬಂದು,

**ಶ್ರೀ ಡಿ. ಕೃಷ್ಣಯ್ಯಂಗಾರ್**

ಗಿರಡಿಯ ರಂಧ್ರದಲ್ಲಿ ಅಡಗಿಕೊಂಡಿದ್ದ ಶುಕ್ರಾಚಾರ್ಯನ ಕಣ್ಣುಗಳನ್ನು ಹುಲ್ಲಿನಿಂದ ತೊಳಸಿದನು. ಪರದಾರ ಅಪಹಾರವೆಂಬ ಮಹಾಪಾತಕ ಮಾಡಿದ ನಿನ್ನ ಕಣ್ಣುಗಳಿಗೂ ಈ ಕಡ್ಡಿಯೇ ಗತಿಯಾಗುವುದು' ಎಂದು ಹುಲ್ಲುಕಡ್ಡಿಯಿಟ್ಟಳು

ದಂಡಕಾರಣ್ಯದಲ್ಲಿ ಹಿಂದೆ ಶ್ರೀರಾಮನು, ತನಗೆ ಅಪರಾಧಮಾಡಿದ ಕಾಕಾಸುರನ ಕಣ್ಣನ್ನು ಮಂತ್ರಿಸಿದ ಹುಲ್ಲಿನಿಂದ ನಾಶಪಡಿಸಿದಂತೆ, ನಿನ್ನ ಕಣ್ಣುಗಳನ್ನು ತೊಳಸುವುದಕ್ಕೆ ಈ ಹುಲ್ಲೇ ಸಾಕು ಎಂಬುದನ್ನು ವ್ಯಕ್ತಪಡಿಸುವುದಕ್ಕಾಗಿ ಹುಲ್ಲನ್ನಿಟ್ಟಳು. "ಸೀತಾಯಾಸ್ತೇಜಸಾ ದಗ್ಧಃ", "ನತ್ವಾ ಕುರ್ಮಿ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹ ತೇಜಸಾದ" ಎಂಬಂತೆ ಸೀತಾದೇವಿಯು ತನ್ನ ಪಾತಿವ್ರತ್ಯ ಅರಣಿ ಬೆಂಕಿಯಲ್ಲಿ, ಈ ಹುಲ್ಲನ್ನು ಹತ್ತಿಸಿ, ಆ ಅಗ್ನಿಯಿಂದ, ರಾಕ್ಷಸನನ್ನೂ ಅವನ ಲಂಕೆಯನ್ನೂ ಭಸ್ಮ ಮಾಡುವ ಪ್ರತಿಜ್ಞೆಯೋ ಎಂಬಂತೆ, ಹುಲ್ಲುಕಡ್ಡಿ ಇಟ್ಟಳು. ಹೀಗೆ ಇನ್ನೂ ಅನೇಕ ಭಾವನೆಯ ಅರ್ಥಗಳನ್ನು ವ್ಯಕ್ತಪಡಿಸಲು, ಪಂಡಿತರು, ಕವಿಗಳು ಪ್ರಯತ್ನಿಸಿದ್ದಾರೆ. ಅವೆಲ್ಲವೂ ಸಂದರ್ಭಕ್ಕೆ ತಕ್ಕಂತೆ ಸರಿಯಾಗಿವೆ.

ಇಲ್ಲಿ 'ಪ್ರತ್ಯುವಾಚ ಶುಚಿಸ್ಮಿತಾ' ಎಂದು ಕವಿ ಹೇಳಿದ್ದಾನೆ. ಸೀತಾದೇವಿಗೆ ಕೋಪ ಸಂಕಟಗಳು ಆವರಿಸಿರುವಾಗ ಮುಗುಳುನಗೆ ಹೇಗೆ ಬಂದಿತು ಎಂಬ ಸಂಶಯ ಬರುವುದು ಸಹಜ ಇಂತಹ ಮಂದಹಾಸಕ್ಕೆ ಅನೇಕ ಅರ್ಥಗಳಿವೆ. ಮಾರಿ ಹಬ್ಬದಲ್ಲಿ ಬಲಿಗೆ ಸಿದ್ಧವಾಗಿರುವ ಕುರಿಯು ತೋರಣದ ಎಲೆಗೆ ಬಾಯಿ ಹಾಕಿತಿನ್ನುವಂತೆ ಈಗಲೋ ಇನ್ನೊಂದು ಕ್ಷಣಕ್ಕೋ ಶ್ರೀರಾಮನ ಬಾಣಕ್ಕೆ ಸಿಕ್ಕಿ ಸಾಯುವ ಈ ಪಾಪಿಗೆ ಇನ್ನೂ ಭೋಗದಾಸೆಯೇ ಎಂಬ ತಿರಸ್ಕಾರ ಆ ಮುಗುಳು ನಗೆಯ ಸೂಚನೆ. ರಾಜರು ನಗುನಗುತ್ತಾ ಕೊಲ್ಲುವರೆಂಬ ನ್ಯಾಯದಯೆ, ಸೀತಾದೇವಿಯ ನಗೆಯೇ ರಾವಣನಿಗೆ ಮೃತ್ಯುಸೂಚಕ.

"ನ ರಾಮಸ್ತಪಸಾ ದೇವಿ ನಬಲೇನ ನವಿಕ್ರಮೈಃ ನ ಧನೇನ ಮಯಾತುಲ್ಯಃ" ಎಂಬಂತೆ 'ಹೇ! ರಾವಣಾ! ಶ್ರೀರಾಮನಿಗಿಂತಲೂ ನೀನೇ ಮೇಲು ಎಂದು ಹೇಳಿಕೊಳ್ಳುವೆ. ಇದೂ ನಿಜವಲ್ಲ. ನೀನು ನನ್ನನ್ನು ಕದ್ದುತಂದು, ರಾಮ ಬಾಣಕ್ಕೆ ಹೆದರಿ, ಅತ್ತಿತ್ತನೋಡದೆ, ಓಡುತ್ತಿರುವಾಗ ನಿನ್ನ ಅವಸ್ಥೆಯನ್ನು ನಾನೇ ನೋಡಿದೆ. ಹೀಗಿರುವಾಗ ನೀನು ನನ್ನ ಮುಂದೆಯೇ ಹೀಗೆ ಅಪಲಾಪ ಮಾಡುವುದಕ್ಕೆ ನಾಚಿಕೆಯಾಗುವುದಿಲ್ಲವೇ' ಎಂಬುದನ್ನು ಆ ಮುಗುಳ್ನಗೆ ವ್ಯಕ್ತಪಡಿಸುವುದು.

ಇಂದೋ, ನಾಳೆಯೋ, ಶ್ರೀರಾಮನ ಬಾಣದಿಂದ ಸತ್ತು ನರಿಕಾಗೆಗಳಿಗೆ ನಿನ್ನದೇಹವು ತುತ್ತಾಗಬೇಕಿರುವಾಗ, "ಶಂಕೇ ಜೀವತಿ ವಾ ನವಾ" – ಶ್ರೀರಾಮನು ಬದುಕಿದ್ದಾನೋ, ಇಲ್ಲವೋ ಎಂದು ಈ ಅವಿವೇಕಿ ಹೇಳುತ್ತಿದ್ದಾನಲ್ಲಾ ಎಂದು ಸೂಚಿಸುವುದಕ್ಕಾಗಿ ಸೀತೆಯ ಮುಗುಳುನಗೆ ಎಂದು ಹೇಳಬಹುದು.

"ವಿಭೀಷಣ ವಿಧೇಯಂ ಹಿ ಲಂಕಾರಾಜ್ಯಮಿದಂ ಕೃತಂ, ಶ್ರೀಮತಾರಾಜರಾಜೇನ" ಎಂಬಂತೆ, ಹೇ! ರಾವಣಾ! ಶ್ರೀರಾಮನು ವಿಭೀಷಣನಿಗೆ ಲಂಕಾರಾಜ್ಯ ಪಟ್ಟಾಭಿಷೇಕಮಾಡಿ, ಲಂಕೆಯನ್ನು ಅದರ ಸಕಲೈಶ್ವರ್ಯವನ್ನು ಕೊಡ.ವಂತೆ ಸಂಕಲ್ಪ ಮಾಡಿ ಆಯಿತು. ಇನ್ನೂ ಅದು ನಿನ್ನದೆಂದು ಭ್ರಮಿಸಿ ನಿನ್ನದೇ ಎಂದು ಹೇಳಿಕೊಳ್ಳುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೇ' ಎಂದು ಆ ಮುಗುಳುನಗೆ ಸೂಚಿಸುವುದು.

ಶ್ರೀರಾಮನು ಲೋಕನಾಥನು. ಅಂತಹ ಮಹಾಮಹಿಮನ ಪತ್ನಿಯಾಗಿ ಅವನಿಗೆ ನಿರ್ಯಾನಪಾಯಿನಿಯಾಗಿರುವ ತನಗೆ 'ಮಾಂಚಭುಕ್ಷ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ಯಥಾಸುಖಂ'ಎಂದು ಸುಖವಾಗಿರುವೆನು ಎಂದು ಹೇಳುವುದಕ್ಕೆ ನಿನಗೆ ಬಾಯಾದರೂ ಹೇಗೆ ಬಂದಿತು ಎಂಬ ತಿರಸ್ಕಾರ ಬುದ್ಧಿಯಿಂದ ಸೀತೆಯು ನಕ್ಕಳು

ರಾವಣನು ಹೇಳಿದ ಅಹಂಕಾರ, ಮಮಕಾರ ಯುಕ್ತವಾದ ಮಾತುಗಳಲ್ಲಿ ಏನೂ ತಿರುಳಿಲ್ಲ. ಇದು ಅವನ ಅಜ್ಞತೆಯ ಫಲ ಎಂದು ಮುಗುಳು ನಕ್ಕಳು. ಕೊನೆಯಲ್ಲಿ ರಾವಣನಿಗೆ ಬುದ್ಧಿವಾದ ಹೇಳುವಳು ಸೀತಾದೇವಿ

'ಹೇ ! ರಾವಣಾ ! ನೀನು ಪ್ರಾಣದಿಂದ ಲಂಕೆಯಲ್ಲಿರಬೇಕಾದರೆ, ನಿನ್ನ ಮನಸ್ಸನ್ನು ಮೊದಲು ತಿಪ್ಪಿಕೋ ನಿನ್ನ ಪತ್ನಿಯ ಕಡೆ, ನಿನ್ನ ಮನಸ್ಸನ್ನು ತಿರುಗಿಸು ಇದರಿಂದ ನಿನಗೆ ಎರಡು ಬಗೆಯ ಕೇಡುತಪ್ಪುವುದು. ಒಂದು ಪರಸ್ತ್ರೀ ಕಾಮುಕತೆಯಿಂದ ಉಂಟಾಗುವ ಅನರ್ಥ, ಇನ್ನೊಂದು ನಿನ್ನ ಪತ್ನಿಯ ದುಃಖದಿಂದ ನಿನಗುಂಟಾಗುವ ನಾಶವನ್ನು ತಪ್ಪಿಸಿಕೊಳ್ಳುವುದು. ಆದುದರಿಂದ ನನ್ನಕಡೆ ಇರುವ ನಿನ್ನ ಮನಸ್ಸನ್ನು ಮೊದಲು ನಿನ್ನ ಪತ್ನಿಯ ಕಡೆ ತಿರುಗಿಸು '

ಈ ಸಂದರ್ಭದಲ್ಲಿ ಆದಿಕವಿ ವಾಲ್ಮೀಕಿ ಮಹರ್ಷಿಯು ಗಮನಾರ್ಹವಾದ ಇನ್ನೊಂದು ಮಾತು ಹೇಳುತ್ತಾನೆ " ಇಹ ಸಂತೋ ನ ವಾ ಸಂತಿ ಸತೋವಾ ನಾನುವರ್ತಸೇ । ಯಥಾಹಿ ವಿಪರೀತಾ ತೇ ಬುದ್ಧಿರಾಚಾರವರ್ಜಿತಾ ", ರಾವಣಾ ! ನಿನ್ನ ರಾಜ್ಯದಲ್ಲಿ ನಿನಗೆ ಬುದ್ಧಿವಾದ ಹೇಳುವ ಸಜ್ಜನರಾರೂ ಇಲ್ಲವೇ ? ನಿನ್ನ ಲಂಕೆಯಲ್ಲಿ ನಡೆಯುವ ವೈದಿಕ ಮರ್ಯಾದೆಗಳೆಲ್ಲವೂ ಬರೀ ತೋರಿಕೆಯೋ? ಇತರರಿಗೆ ಅನರ್ಥಗಳನ್ನುಂಡುವ ಪ್ರಹಸ್ತ, ಅತಿಕಾಯ, ಮಹಾಕಾಯ ಧೂಮ್ರಾಕ್ಷಾದಿಗಳೆಲ್ಲ ಅಸತರುಗಳೇ ? ಸಾಧುಗಳಾರೂ ಇಲ್ಲವೇ ? ಸತ್ಪುರುಷರು ಇಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಸತ್ಪುರುಷರಿಲ್ಲದ ಲಂಕಾರಾಜ್ಯ ಹೇಗೆ ತಾನೆ ಸಂಪತ್ಸಮೃದ್ಧಿಯಿಂದ ಕೂಡಿರುವುದು? ಇಂತಹ ಶ್ರೀಮಂತಿಕೆಗೆ, ಧರ್ಮಾನುಷ್ಠಾನ, ವೈದಿಕಮನೋವೃತ್ತಿಗಳು ಕಾರಣವಾಗಿರಬೇಕು. ಅಂತಹ ಸಾಧು ಸತ್ಪುರುಷರನ್ನು ಅನುವರ್ತಿಸುವುದು ನಿನ್ನ ಕಾರ್ಯವಲ್ಲವೇ ? ಅಥವಾ ಅವೊಂದೂ ಕಾಣದೆ, ಕೇವಲ ಬಾಹ್ಯ ವ್ಯಾಪಾರವೊಂದೇ ಕಾಣುವುದೋ ? '

ಇಷ್ಟೆಲ್ಲಾ ಹೇಳಿದರೂ, ರಾವಣನ ವಕ್ರಬುದ್ಧಿಯು ಸರಿಯಾಗಿಲ್ಲದಿದ್ದುದನ್ನು ಕಂಡು ಮರುಗಿ ಬುದ್ಧಿವಾದ ಹೇಳುವಳು. 'ರಾವಣಾ ! ಶ್ರೀರಾಮನೊಡನೆ ನಿನಗೆ ದ್ವೇಷಬೇಡ. ವಿರೋಧ ಕಟ್ಟಿಕೊಳ್ಳಬೇಡ, ಅವನೊಡನೆ ಸ್ನೇಹದಿಂದಿರು, ಶರಣಾಗತಿ ಹೊಂದು. ನೀನು ನೇರವಾಗಿ ಅವನಿಗೆ ಶರಣು ಎಂದು ಹೇಳದಿದ್ದರೂ, ಮಿತ್ರನಾಗಿರುವೆನು ಎಂದು ಹೇಳಿದರೇ ಸಾಕು. ಮಿತ್ರಶಬ್ದ ಉಪಯೋಗಿಸಿದುದಕ್ಕೆ ಅವನು ಹರ್ಷಿಸಿ, ನಿನಗೆ ಗೌರವ ಕೊಡುವನು. ಎಷ್ಟೇ ನೀಚ ಕೆಲಸ ಮಾಡಿದ್ದರೂ ಎಷ್ಟೇ ಅಪರಾಧ ಮಾಡಿದ್ದರೂ, ಮಿತ್ರನಾಗಿರುವೆನು ಎಂಬ ಶಬ್ದವನ್ನು ಕೇಳಿದ ತಕ್ಷಣ ಶ್ರೀರಾಮನು ಅವನು ತನ್ನ ಸಮಾನವೆಂದೇ ಭಾವಿಸಿ, ಉದಾರಭಾವವನ್ನು ತೋರಿಸುವನು' ಎನ್ನುವಳು.

'ಶ್ರೀಲೋಕಾ ಸಂಪರಿಕ್ರಮ್ಯ' – ಕಾಕಾಸುರನು, ಶ್ರೀರಾಮನಲ್ಲಿ ಅಪರಾಧ ಮಾಡಿದಾಗ ಅವನು ಕಾಕಾಸುರನ ಮೇಲೆ ಒಂದು ಹುಲ್ಲನ್ನು ಮಂತ್ರಿಸಿ ಅಸುರನಮೇಲೆ ಬಿಟ್ಟಾಗ, ಅದು ಅವನನ್ನು ಕೊಲ್ಲುವುದಕ್ಕೆ ಅಟ್ಟಿಸಿಕೊಂಡು ಹೋಯಿತು. ಅಸುರನು ಮೂರುಲೋಕವನ್ನು ಸುತ್ತಿ, ಅವನನ್ನು ಯಾರೂ ರಕ್ಷಿಸಲಾರದಿರುವಾಗ, ಕೊನೆಗೆ ಶ್ರೀರಾಮನ ಪಾದಗಳ ಮೇಲೆ ಬಿದ್ದು ರಕ್ಷಣೆ ಪಡೆದನು, ರಾವಣಾ ! ನೀನೂ ಕೂಡ ಶ್ರೀರಾಮನಲ್ಲಿ ಅಪರಾಧಮಾಡಿರುವೆ. ಆದರೆ ನೀನು ಕಾಕಾಸುರನಂತೆ ಅಲೆಯಬೇಕಾಗಿಲ್ಲ. ಒಂದೇಕಡೆ ಲಂಕೆಯಲ್ಲಿಯೇ ನಿಲ್ಲಬೇಕಾದರೆ, ಶ್ರೀರಾಮನನ್ನು ಆಶ್ರಯಿಸು'.

'ರಾವಣಾ ! ಚತುರಂಗಬಲ ಸಮೇತವಾಗಿ ನಿನ್ನಪರಿವಾರಗಳೆಂದೂ ನಾಶವಾಗದೆ ಇರಬೇಕಾದರೆ, ಅತಿಕಾಲ, ಮಹಾಪಾರ್ಶ್ವ, ಪ್ರಹಸ್ತಾದಿ ಮಂತ್ರಿವರ್ಗ ನಾಶವಾಗದೆ ಸುರಕ್ಷಿತವಾಗಿರಬೇಕಾಗಿದ್ದರೆ, ಕುಂಭಕರ್ಣ, ಇಂದ್ರಜಿತ್ತಾದಿ ಬಂಧುಗಳೂ, ನಿನ್ನ ಸಕಲ ಐಶ್ವರ್ಯವೂ, ರಾಜಧಾನಿಯಾದ ಲಂಕೆಯೂ ನಾಶವಾಗದೆ ಇರಬೇಕಾದರೆ, ನಿನಗಿರುವ ಒಂದೇಮಾರ್ಗ, ಶ್ರೀರಾಮನನ್ನು ಆಶ್ರಯಿಸುವುದು '.

'ರಾವಣಾ ! ಎಲ್ಲರೂ ಹೋಗಲಿ, ಎಲ್ಲವೂ ನಾಶವಾಗಲಿ, ನಾನೊಬ್ಬ ಬದುಕಿಕೊಂಡರೆ ಸಾಕು, ಎಲ್ಲಿಯಾದರೂ ಇದ್ದುಕೊಳ್ಳುವೆನು ಎಂದು ನೀನು ಭಾವಿಸುವುದಾದರೆ, ಅದೂ ಸಾಧ್ಯವಿಲ್ಲ. " ರಸಾತಲಂ ಹಿ ಪ್ರವಿಶೇತ್ಪಾಳಂಚಾಪಿ ರಾವಣಾ। ಪಿತಾಮಹ ಸಕಾಶಂ ವಾ ನನೋ ಜೀವ್ವ ಹಿ ಮೋಕ್ಷ್ಯೆ ಸೇ '– ಎಂಬಂತೆ ನೀನು ಯಾವ ಲೋಕಕ್ಕೆ ಹೋದರೂ, ಕೊನೆಗೆ ನಿನಗೆ ವರದಾನಮಾಡಿದ ಬ್ರಹ್ಮದೇವನ ಬಳಿಗೆ ಹೋದರೂ ನೀನು ಬದುಕಲಾರೆ.'

'ರಾವಣಾ! ಎಂದಾದರೊಂದು ದಿನ ಸಾಯಬೇಕಲ್ಲವೇ ? ಸಾವಿಗಾಗಿ ಚಿಂತೆಯೇಕೆ ? ಭಯಪಡಲೇಕೆ ? ಎಂದು ನೀನು ಭಾವಿಸುವುದಾದರೆ ಅದೂ ಸರಿಯಲ್ಲ, ಏಕೆಂದರೆ ಇದು ವ್ಯಾಧಿಪೀಡಿತ ಸಾವಿನಂತಲ್ಲ. ಇದು ಒಂದು ಬಗೆಯ ದುರ್ಮರಣರೂಪವಾದ ಕೊಲೆ, ವೀರನಾದವನಿಗೆ, ಬಲಿಷ್ಠನಾದ ಆಗುವ ವಧೆಯು ಮೇಲಾದುದಲ್ಲ, ನೀನು ಮಹಾಪರಾಧಿ. ನಿನ್ನ ವಧೆ ಎಂಬುದು ಮಹಾಘೋರ. ಅದೊಂದು ಚಿತ್ರವಧೆ. ಇದು ಉಂಟಾಗಬಾರದಿರಲೆಂಬ ಇಷ್ಟವಿದ್ದರೆ, ರಾವಣಾ ! ನೀನು ಶ್ರೀರಾಮನನ್ನು ಆಶ್ರಯಿಸು.'

'ರಾವಣಾ ! ನಿನ್ನ ಹತ್ತು ತಲೆಗಳನ್ನು ಶ್ರೀರಾಮನು ಒಂದೊಂದಾಗಿ ಕತ್ತರಿಸುವನು. ಇಂತಹ ಕ್ರೂರ ಶಿಕ್ಷೆಯನ್ನು ಅವನು ಇಲ್ಲಿಯವರೆವಿಗೆ ಯಾರಿಗೂ ವಿಧಿಸಿಲ್ಲ. ಇಂತಹ ಅತಿಕ್ರೂರ ವಧೆಯನ್ನು ತಪ್ಪಿಸಿಕೊಳ್ಳಬೇಕಾದರೆ ನಿನಗಿರುವ ಒಂದೇ ಮಾರ್ಗ ಶ್ರೀರಾಮನನ್ನು ಆಶ್ರಯಿಸುವುದು.'

'ಹೇ ರಾವಣಾ ! ಮಹಾಪರಾಧಿಯಾದ, ನನ್ನನ್ನು ಶ್ರೀರಾಮನು ಪರಿಗ್ರಹಿಸಿ ರಕ್ಷಿಸಿಯಾನೇ? ಎಂಬ ಶಂಕೆಯನ್ನು ನೀನು ಇಟ್ಟುಕೊಳ್ಳಬೇಡ, ಶ್ರೀರಾಮನು ಸಾಮಾನ್ಯನಲ್ಲ. ಪುರುಷೋತ್ತಮನು, ಸರ್ವರಕ್ಷಕನು, ಅಪರಾಧಿಯ ದೋಷವನ್ನು ಪರಿಗಣಿಸತಕ್ಕವನಲ್ಲ, ಅಪಕಾರ, ಅಪರಾಧಗಳನ್ನು ಮನಸ್ಸಿಗೆ ತಂದುಕೊಳ್ಳುವವನಲ್ಲ. "ಅಪರಾಧಾನಭಿಜ್ಞಸ್ಯ ಸದ್ಯೈವಕುರುತೇ ದಯಾಂ" ಎಂಬಂತೆ ನಿನ್ನ ಅಪರಾಧವೆಲ್ಲವನ್ನೂ ಮರೆತು ರಕ್ಷಿಸುವನು. ಹಾಗೆಮಾಡದಿದ್ದರೆ, ಈ ಜಗತ್ತಿನಲ್ಲಿ ನಿನ್ನನ್ನು ರಕ್ಷಿಸುವವರು ಯಾರೂ ಇಲ್ಲ. ಇದನ್ನು ಚೆನ್ನಾಗಿ ಜ್ಞಾಪಕದಲ್ಲಿಡು. ಶ್ರೀರಾಮನನ್ನು ಆಶ್ರಯಿಸು." ಎಂದು ವಿವಿಧ ರೀತಿಯಲ್ಲಿ ಸೀತಾದೇವಿಯು ರಾವಣನಿಗೆ ಹಿತೋಪದೇಶ ಮಾಡುವಳು.

ಸೀತಾದೇವಿಯನ್ನು ಕುರಿತು ಹೇಳುವ ರಾವಣನ ವಾಕ್ಯಗಳು ಹೊರನೋಟಕ್ಕೆ ಪರುಷವಾಕ್ಯಗಳಂತೆ ಕಂಡರೂ ತತ್ತ್ವದೃಷ್ಟಿಯಿಂದ ವಿಚಾರಮಾಡಿದರೆ ಅವು ಭಕ್ತಿ ಪ್ರಚುರವಾಗಿ, ಸೌಮ್ಯವಾಕ್ಯಗಳಾಗಿ ಅನೇಕ ಭಾವಾರ್ಥಗಳನ್ನು ಹೊಂದಿವೆ ಎಂದು ಹೇಳಲ್ಪಟ್ಟಿವೆ, ಶ್ರೀಮದ್ರಾಮಾಯಣದ ಇಂತಹ ಅನೇಕ ಸಂದರ್ಭಗಳಲ್ಲಿ ಅಲ್ಲಿ ಬರುವ ಅನೇಕ ವಾಕ್ಯಗಳಿಗೆ, ಇಂತಹ ಅಂತರಾರ್ಥಗಳನ್ನು ವ್ಯಾಖ್ಯಾನಕಾರರೂ, ಮಹಾಪಂಡಿತರೂ ಆದ ಗೋವಿಂದರಾಜಜೀಯರು, ಮಹೇಶ್ವರತೀರ್ಥರು, ಪೆರಿಯ ವಾಚ್ಛಾಪಿಳ್ಳೆ ಮುಂತಾದವರು ವ್ಯಕ್ತಪಡಿಸಿದ್ದಾರೆ. ಅವೆಲ್ಲವೂ ಸಮಂಜಸವಾಗಿರುವುದಲ್ಲದೆ, ಸರ್ವಗ್ರಾಹ್ಯಗಳಾಗಿವೆ.



( 16ನೇ ಪುಟದಿಂದ)

ಹಿನ್ನಲೆಯಲ್ಲಿ ಸತ್ಯಭಾಮೆ ಮತ್ತು ರುಕ್ಮಿಣಿಯರ ವಿರಸವನ್ನು ಹೊರಗೆಡಹಿದ್ದಾರೆ. ತಾನು ಕೃಷ್ಣನನ್ನು ದೈವಭಕ್ತಿಯಿಂದ ಮತ್ತು ಪತಿವಾತ್ಸಲ್ಯದಿಂದ ಕಾಣುತ್ತಿರುವಾಗ ಮರ್ಯಾದೆಯಿಲ್ಲದೆ ಸರಸವಾಡುವ ಸತ್ಯಭಾಮೆಯನ್ನು ಈ ರೀತಿ ಟೀಕಿಸುವಳು.

ಧರೆಯು ಮ್ಯಾಲೆ ಹಿರಿಯಳು ನಾ
ನಿರಲು ಲಜ್ಜೆ ತೊರೆದು ನೀನು
ಸರಸವಾಡುತಿ ಮುರಹರನ
ಕರೆದು ಭಾಮಿನಿ ಸುಗುಣೆ ಕಾಮಿನಿ

ಮೊದಲೇ ಮುಂಗೋಪಿಯಾದ ಸತ್ಯಭಾಮೆ ಕದನಕ್ಕೆ ನಿಂತು ಬಿಡುವಳು. ರುಕ್ಮಿಣಿಯ ಮಾತಿಗೆ ಮುಖ ಸಿಂಡರಿಸಿಕೊಂಡು

ಪತಿಯು ಪ್ರೀತಿ ಎನ್ನ ಮ್ಯಾಲೆ
ಅತಿಶಯದಿ ಇರಲು ಜೇಷ್ಠ
ಸತಿಯಳೇನೇ ನೀನು ನೋಡು
ಮತಿಯು ರುಗ್ಮಿಣಿ ಸುಪದ್ಮಗಂಧಿನಿ

ಎಂದು ಉತ್ತರವೀಯುವಳು. ಹೀಗೆ ಇಬ್ಬರು ತಮ್ಮ ತಮ್ಮನ್ನು ಹಳಿದುಕೊಂಡು ಜಗಳವಾಡುತ್ತಿದ್ದಾಗ, ಶ್ರೀಕೃಷ್ಣನು ಅಗಮಿಸಿ ಇಬ್ಬರಿಗೂ ಸಮಾಧಾನ ಹೇಳುವನು.

ಸಾರವಚನ ಕೇಳಿ ಭಾಮೆ
ಮೋರೆ ಕೆಳಗೆ ಮಾಡುತಿರಲು
ನಾರಿ ರುಕ್ಮಿಣಿ ಭಾಮೆಯರನ್ನು
ವೀರ ಕರೆದನು ತಾಸೇರಿ ಮೆರದನು

ಎಂದು ಶ್ರೀಪಾದರಾಜರು ವರ್ಣಿಸಿರುವರು.

ಕರ್ಣಾಟಕದ ಹರಿದಾಸರುಗಳಂತೆ ನಿಂದಾಸ್ತುತಿ ರಚಿಸಿರುವುದರಲ್ಲಿ ಶ್ರೀಪಾದ ರಾಜರು ಹಿಂದೇನೂ ಇಲ್ಲ. ಲಕ್ಷ್ಮಿದೇವಿಯು ತನ್ನ ರೂಪಕ್ಕೆ ಅನುರೂಪನಲ್ಲದ ವಾಸುದೇವನನ್ನು ವರಿಸಿದಳೆಂದು ನಗೆಯಾಡಿದ್ದಾರೆ. ಅದಲ್ಲದೆ ಆಕೆಯನ್ನು ಹಂಗಿಸಿ, ಗೋಕುಲದಲ್ಲಿ ವಾಸುದೇವನು ಮಾಡಿದ ವರ್ಣನೆಗಳನ್ನು, ಸೋದರ ಮಾವನ ಸಂಹಾರ ಎಲ್ಲವನ್ನು ವ್ಯಂಗ್ಯವಾಗಿ ವರ್ಣಿಸಿರುವರು.

ಒಲಿದೆ ಯಾತಕಮ್ಮಾ ಲಕ್ಷ್ಮಿ
ಯೀ ವಾಸುದೇವಗೆ
ಶುದ್ಧ ನೀಲವರ್ಣದ ಮೈಯು ಕಪ್ಪಿ
ನವನಿಗೆ ಹ್ಯಾಗೆ
ಹುಟ್ಟಿದ ಮನೆಗಳ ಬಿಟ್ಟು-ಕಳ್ಳ
ದಿಟ್ಟತನದಿ ಗೋಕುಲದಲ್ಲಿ ಬೆಳೆದ
ಜಟ್ಟಿ ಸಹಿತ ಹಾಲು ಕುಡಿದ - ಅಲ್ಲಿ
ದಿಟ್ಟ ಕಾಳಿಂಗನ ಹೆಡೆಯು ತುಳಿದವನಿಗೆ
ಗೊಲ್ಲರ ಮನೆಗಳ ಪೊಕ್ಕು - ಅಲ್ಲಿ
ಗುಲ್ಲು ಮಾಡದೆ ಮೊಸರೆಲ್ಲ ಸವಿದ
ಮೆಲ್ಲನೆ ಸವಿಮಾತನಾಡಿ - ಅಲ್ಲಿ
ಎಲ್ಲ ಸಖಿಯರ ಅಭಿಮಾನಗೇಡಿಗೆ
ಮಾವನ ಮರ್ದಿಸಿದವಗೆ - ಅಲ್ಲಿ
ಸೋಳ ಸಾವಿರ ಗೋಪೇರಿಗೆ ಮದುವೆ
ಆವವಗೆ
ಹಾವಿನ ಮ್ಯಾಲೊರಗಿದವಗೆ
ಕಾವೇರಿ ತೀರದ ರಂಗ ವಿಠಲಗೆ

ಕೃಷ್ಣನನ್ನು ಎಲ್ಲರಂತೆ ಕಂಡರೂ ಶ್ರೀಪಾದ ರಾಜರು ಅವನು ಭಗವಂತನ ಅವತಾರ ಎಂಬುದು ಮರೆತಿಲ್ಲ.

ಅಸೀಮವಾದ ಪಾಂಡಿತ್ಯದಿಂದ ಶ್ರೀಪಾದ ರಾಜರು ದಾಸಸಾಹಿತ್ಯದಲ್ಲಿ ಶೋಭಾಯಮಾನರು. ಕೃತಿಗಳಲ್ಲಿ ಕೃಷ್ಣನ ಅಪಾರ ದರ್ಶನವನ್ನು ಮಾಡಿಸಿರುವ ಇವರು ಪ್ರಾತಃ ಸ್ಮರಣೀಯರು. ಧ್ರುವಾಂಶ ಸಂಭೂತರಾದ ಇವರು ದಾಸಸಾಹಿತ್ಯದಲ್ಲಿ ಧ್ರುವತಾರೆಯಂತೆ ರಾರಾಜಿತರು.

———

# ಧರ್ಮದ ವ್ಯಾಖ್ಯೆ

ಧರ್ಮದ ವ್ಯಾಖ್ಯಾನ ಮಾಡಲು ಹೊರಟವರು
ಗಂಟೆಗಟ್ಟಲೆ, ದಿನಗಟ್ಟಲೆ, ವಾರ, ಪಕ್ಷ, ತಿಂಗಳುಗಟ್ಟಲೆ–
ಬಿಗಿದರು ಭಾಷಣವ ; ಉದಾಹರಿಸಿದರು ಉಪಾಖ್ಯಾನಗಳ
ಸರಳವನ್ನೂ ಜಟಿಲವಾಗಿಸಿ, ಜಟಿಲವನ್ನು ಕುಟಿಲವಾಗಿಸಿ
ಗುಟ್ಟನ್ನು ಇನ್ನಷ್ಟು ಗುಟ್ಟಾಗಿಸಿ, ಏನೇನೋ ಹೇಳಿ,
ಎಲ್ಲಾ ಹೇಳಿದೆವೆಂದು ತಿಳಿದು ಕುಳಿತರು !

ಧರ್ಮದ ವ್ಯಾಖ್ಯಾನ ಬರೆದವರು ಪುಟಗಟ್ಟಲೆ ಬರೆದರು
ಟೀಕೆಗೆ ಟಿಪ್ಪಣಿ, ಟಿಪ್ಪಣಿಗೆ ಮರುವ್ಯಾಖ್ಯೆ, ವ್ಯಾಖ್ಯೆಗೆ ಭಾಷ್ಯ
ಏನೇನೋ ಬರೆದು ಬರೆದಗಾತ್ರ ಬ್ರಹ್ಮಾಂಡವಾಯಿತು!

ನಿನ್ನ ನೀನು ತಿಳಿ, ತನ್ನಂತೆ ಪರರ ಬಗೆ, ದಯೆದೋರು,
ಪರೋಪಕಾರ ಮಾಡು, ಸಹನೆಯುಳ್ಳವನಾಗು, ಗುಣಕ್ಕೆ ಬಾಗು,
ಮದಮತ್ಸರವನುಳಿ, ಸತ್ಯವನುಡಿ – ಹೀಗೆ ಈ ಬಿಡಿಬಿಡಿನುಡಿಗೆ
ತಕ್ಕಂತೆ ನಾವು ನಡೆಯುತ್ತಿದ್ದರೆ ಅದೆಷ್ಟು ಸ್ಪಷ್ಟವ್ಯಾಖ್ಯೆ
ಧರ್ಮಕ್ಕಾಗುತ್ತಿತ್ತು ! ಹಿತಮಿತ ವಾಕ್ಕು ಅದಾಗುತ್ತಿತ್ತು !
ತಿಳಿದೆವೆಂದು ತಿಳಿಯದೆ ಹೇಳಿ; ಬಾಳಬೇಕೆಂದು ಹೇಳಿ,
ಹೇಳಿದಂತೆ ಬಾಳದೆ; ಈ ನಡೆನುಡಿಗಳ ವ್ಯತ್ಯಯ
ಧರ್ಮಮೀಮಾಂಸೆಯ ಎಂತಹ ವಿಪರ್ಯಾಸ ?
ಗ್ರಂಥ ಕೋಟಿಗಳಲ್ಲಡಗಿದ ನುಡಿಯೊಂದ ನುಡಿದನು ವ್ಯಾಸ
“ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥”

ಕೆ. ಸುಬ್ರಹ್ಮಣ್ಯಭಟ್ಟ, ಎಂ.ಎ.

( 1?ನೇ ಪುಟದಿಂದ)

ಗಳಿಗಿಂತ ಎಲ್ಲ ಗುಣಗಳಲ್ಲಿ ಹಿರಿಯನೆಂದು ಅವರು ಸಾರಿದ್ದಾರೆ. ಶ್ರೀಪಾದರಾಜರು ಈ ವಿಚಾರವನ್ನು ಅನೇಕ ಕತೆಗಳ ಮೂಲಕ ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಚಿತ್ರಿಸಿದ್ದಾರೆ

ಭೃಗು ಮಹರ್ಷಿ ಒಮ್ಮೆ, ಈಶ್ವರ ಮತ್ತು ವಿಷ್ಣು ಲೋಕಗಳಿಗೆ ಹೋಗಿ ಇವರ ಚಿತ್ತ ಸಹನೆಯನ್ನು ಪರೀಕ್ಷಿಸಿದಾಗ ವಿಷ್ಣುವೇ ಸರ್ವೋತ್ತಮನೆಂದು ತಿಳಿದರಂತೆ ವಿಷ್ಣುವಿನ ಅರಮನೆಗೆ ನುಗ್ಗಿ ಮಲಗಿದ್ದ ಅವನ ಎದೆಗೆ ಕೋಪದಿಂದ ಕಾಲಿನಿಂದ ಒದ್ದಾಗ, ವಿಷ್ಣು ನಗು ನಗುತ್ತಾ ಎದ್ದು "ನಿಮ್ಮ ಕಾಲಿಗೆ ನೋವಾಯಿತೆ?" ಎಂದು ಪ್ರಶ್ನಿಸಿ ಭೃಗು ಮಹರ್ಷಿಯನ್ನು ಉಪಚರಿಸಿದನಂತೆ! 'ತಾಳಿದವನು ಬಾಳಿಯಾನು' ಎಂದು ಗಾದೆ ಇಲ್ಲವೆ? ವಿಷ್ಣುವಿಗಿರುವ ತಾಳ್ಮೆ ಲೋಕದಲ್ಲಿ ಇತರರಿಗಿಲ್ಲವೆಂದು ಕಂಡುಕೊಂಡ ಪರಿಯ ಕತೆಯನ್ನು ಶ್ರೀಪಾದರಾಜರು ತಿಳಿಸಿ 'ಬಿಡಿ ಬಿಡಿ ಸಂದೇಹವನು ಪೊಡವಿ ಮನುಜರೆಲ್ಲರ ಒಡೆಯನೊಬ್ಬನೇ ಬಗನಿ ರಂಗ ವಿಠಲ' ಎಂದಿದ್ದಾರೆ ಲಕ್ಷ್ಮೀದೇವಿಯನ್ನು ವಿಷ್ಣುವಿನ ಜೊತೆಯಲ್ಲಿಯೇ ಭಜಿಸುವುದು ಮಧ್ವರ ಸಂಪ್ರದಾಯವಾಗಿದೆ.

ದ್ವೈತ ಸಿದ್ಧಾಂತದಲ್ಲಿ ಸೃಷ್ಟಿಕರ್ತನಾದ ಬ್ರಹ್ಮನಿಗೆ ಎರಡನೆಯ ಸ್ಥಾನವಿದೆ. ಅದರಂತೆಯೇ ವಾಯುದೇವರನ್ನು ದೇವೋತ್ತಮರೆಂದು ಹೇಳುತ್ತಾರೆ ಹನುಮ, ಭೀಮ, ಮತ್ತು ಮಧ್ವರು, ವಾಯುದೇವರ ಅವತಾರವೆಂದು ಹೇಳುವುದಂಟು ಇದನ್ನನುಸರಿಸಿ ಶ್ರೀಪಾದರಾಜರು 'ಮಧ್ವನಾಮ'ವನ್ನು ಇಪ್ಪತ್ತೇಳು ನುಡಿಗಳಲ್ಲಿ ರಚಿಸಿದ್ದಾರೆ ಇಲ್ಲಿ ಹನುಮ, ಭೀಮ, ಮಧ್ವರ ಚರಿತ್ರೆಗಳನ್ನು ಹೃದಯಂಗಮವಾಗಿ ವರ್ಣಿಸುತ್ತಾರೆ. 'ಜಯ ಜಯ ಜಗತ್ರಾಣ ಜಗದೊಳಗೆ ಸುತ್ರಾಣ ಅಖಿಳ ಗುಣ ಸದ್ಧಾಮ ಮಧ್ವನಾಮ' ಎಂಬ ಈ ಕೃತಿ ಹರಿದಾಸಸಾಹಿತ್ಯದಲ್ಲಿ ಸುಪ್ರಸಿದ್ಧ ರಚನೆ ಎನಿಸಿದೆ.

ಈಶ್ವರ ಮನಸ್ಸಿಗೆ ಅಭಿಮಾನಿ, ಲಯಕರ್ತ, ಎಂದು ಈ ಸಿದ್ಧಾಂತದಲ್ಲಿ ಹೇಳಲಾಗಿದೆ. ಈಶ್ವರನನ್ನು ಕುರಿತು ಹೊಗಳಿರುವ ಕೃತಿಯೊಂದರಲ್ಲಿ ಅವನ ಗುಣಗಳನ್ನು ಶ್ರೀಪಾದರಾಜರು ಚಿತ್ರಿಸಿದ್ದಾರೆ. 'ವೃಷಭನೇರಿದ ವಿಷಧರನ್ಯಾರೆ ಪೇಳಮ್ಮಯ್ಯ' ಎಂಬ ಗೆಳತಿಯ ಪ್ರಶ್ನೆಗೆ, 'ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ ಜಟಾಮಂಡಲ ಧಾರಿ ಕಾಣಮ್ಮ' ಎಂದು ಒಬ್ಬಳು ಉತ್ತರಿಸಿದಳಂತೆ.ಮುಂದೆ ಅವನು ವಿಷಕಂಠನಾದುದು ನೋಹಿನಿಗೆ ಸೋತದ್ದು, ದಕ್ಷನ ಯಜ್ಞವನ್ನು ಸಂಹರಿಸಿದ ಕತೆಗಳನ್ನು ಸಂಗ್ರಹವಾಗಿ ನಿರೂಪಿಸಿರುವರು.

ಶ್ರೀಪಾದರಾಜರು ಜನತೆಗೆ ಕೊಟ್ಟ ಕರೆ ಕಡಿಮೆಯಾದರೂ ಅಮೂಲ್ಯವಾಗಿದೆ ಮನುಷ್ಯ ತನ್ನ ಜೀವನ ಸುಖಮಯವಾಗಲೆಂದು ನಾನಾ ವಿಧದ ಪ್ರಯತ್ನಗಳನ್ನು ಪ್ರತಿನಿತ್ಯವೂ ಮಾಡುತ್ತಿರುತ್ತಾನೆ ಈ ಪ್ರಯತ್ನಗಳಲ್ಲಿ ಗೆಲುವು - ಸೋಲುಗಳನ್ನೂ ಅನುಭವಿಸುತ್ತಿರುತ್ತಾನೆ. ಸೋಲಿನಲ್ಲಿ ಸುಖ ಕಾಣಬೇಕಾದರೆ ಮನುಷ್ಯ ಅಹಂಕಾರವನ್ನು ಬಿಟ್ಟು ಜೀವಿಸಬೇಕು ಅನ್ಯರ ಹಣವನ್ನು ಕಸಿಯುವ, ಅಕಾರಣವಾಗಿ ದೌರ್ಜನ್ಯವನ್ನು ಬೇರೆಯುವರ ಮೇಲೆ ತೋರುವ, ತನ್ನ ಅಧಿಕಾರದಲ್ಲಿ ಎಲ್ಲವೂ ಇರಬೇಕೆಂದು ಆಸೆಪಡುವ ಮನುಷ್ಯನ ಮನಸ್ಸಿಗೆ ಶಾಂತಿ ದೊರೆಯುವುದಿಲ್ಲವೆಂಬುದನ್ನು ಶ್ರೀಪಾದರಾಜರು ಅನೇಕ ಕತೆಗಳ ಮೂಲಕ ತಿಳಿಸಿರುತ್ತಾರೆ ನರಕಾಸುರ, ಕಾರ್ತವೀರ್ಯಾರ್ಜುನ, ದುರ್ಯೋಧನ, ನಹುಷ ಮೊದಲಾದವರು ಮೆರೆದು ಕೊನೆಯಲ್ಲಿ ಹೇಗೆ ದುಃಖಪಟ್ಟರೆಂಬುದನ್ನು ಜ್ಞಾಪಿಸಿ ಧ್ರುವ, ವಿಭೀಷಣ, ಹನುಮಂತರು ಹೇಗೆ ಬದುಕಿ ಬಾಳಿದರೆಂಬುದನ್ನು ತಿಳಿಸಿ 'ರಂಗ ವಿಠಲನ' ನಂಬಿ ಅನ್ಯರಿಗೆ ತೊಂದರೆ ಕೊಡದೆ ಬಾಳಬೇಕೆಂದು ಹೇಳಿರುವ ಶ್ರೀಪಾದ ರಾಜರ ಉಪದೇಶ ಎಲ್ಲ ಕಾಲದ, ಎಲ್ಲ ದೇಶದ ಜನರೂ ತಿಳಿದು ಅನುಸರಿಸಬೇಕಾದುದಾಗಿದೆ.

## ಮಹಿಮಾ ಪುರುಷ

ಶ್ರೀಪಾದರಾಜರು ತಮ್ಮ ತಪೋಬಲದಿಂದ ಕೆಲವು ಮಹಿಮೆಗಳನ್ನು ತೋರಿದವರೆಂದು ಪ್ರಸಿದ್ಧರಾಗಿದ್ದಾರೆ. ಒಮ್ಮೆ ಇವರ ಶಕ್ತಿಯನ್ನು ಪರೀಕ್ಷಿಸಬೇಕೆಂದು ಕೆಲವರು ಇವರ ಬಳಿಗೆ ಬಂದರಂತೆ, ಶ್ರೀಪಾದರಾಜರು ಅವರನ್ನು ಕಂಡು ಕೋಪಗೊಳ್ಳಲಿಲ್ಲ. ನಗುನಗುತ್ತಾ ಅವರನ್ನು ಸ್ವಾಗತಿಸಿ ಅವರಿಗೆ ಗೇರೆಣ್ಣೆಯಲ್ಲದ್ದಿ ಕಪ್ಪಾದ ವಸ್ತ್ರವನ್ನು ಕೊಟ್ಟು ಅದನ್ನು ಶುಭ್ರಮಾಡಿಕೊಂಡು ಬರಲು ಹೇಳಿದರಂತೆ; ಪವಾಡ ಪರೀಕ್ಷಕರು ಬಟ್ಟೆಯನ್ನು ಶುದ್ಧ ಮಾಡಲು ಸಾಧ್ಯವಾಗದೆ ಹಿಂದಿರುಗಿಸಿದರು. ಆಗ ಶ್ರೀಪಾದರಾಜರು ಶಂಖೋದಕವನ್ನು ಮಂತ್ರಿಸಿ ಅದರ ಮೇಲೆ ಚಿಮುಕಿಸಿದಾಗ ಆ ಬಟ್ಟೆ ಬಿಳುಪಾಗಿ ಶೋಭಿಸಿತಂತೆ! ಪವಾಡ ಪರೀಕ್ಷಕರಿದುರಿಗೆ ಈ ಕಾರ್ಯ ನಡೆದುದರಿಂದ ಅವರು ನಿರುತ್ತರರಾದರೆಂದು ಹೇಳುತ್ತಾರೆ

ಕ್ರಿ. ಶ. ಹದಿನೈದನೆಯ ಶತಮಾನದಲ್ಲಿ ತಿರುಪತಿ ಬಳಿಯ ಚಂದ್ರಗಿರಿ ಪ್ರಾಂತ್ಯಕ್ಕೆ ಸಾಳುವ ನರಸಿಂಹನು ರಾಜನಾಗಿದ್ದನು. ಶ್ರೀಪಾದರಾಜರ ವಿದ್ವತ್ತು, ಪಾಂಡಿತ್ಯ, ತಪೋಶಕ್ತಿಗಳಿಂದ ಪ್ರಭಾ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ವಿತನಾದ ನರಸಿಂಹಭೂಪಾಲನು ಶ್ರೀಪಾದ ರಾಜರನ್ನು ಸಿಂಹಾಸನದ ಮೇಲೆ ಕೂಡಿಸಿ ಮುತ್ತಿನ ಕವಚ, ರತ್ನಕುಂಡಲಗಳನ್ನಿತ್ತು ಸತ್ಕರಿಸಿದನೆಂದು ಐತಿಹ್ಯವಿದೆ.

ಒಮ್ಮೆ ಶ್ರೀಪಾದರಾಜರ ಶಿಷ್ಯರು ಗಂಗಾ ಸ್ನಾನ ಮಾಡಬೇಕೆಂದು ಅಪೇಕ್ಷಿಸಿದರಂತೆ ಆಗ ಮುಳಬಾಗಿಲಿನ ನರಸಿಂಹತೀರ್ಥಕ್ಕೆ ಮರುದಿನ ಪ್ರಾತಃಕಾಲದಲ್ಲಿ ಗಂಗೆ ಹರಿದು ಬರುವುದಾಗಿ ಗುರುಗಳು ತಿಳಿಸಿದರಂತೆ! ಶಿಷ್ಯರಿಗೆಲ್ಲ ತುಂಬ ಆಶ್ಚರ್ಯವಾಯಿತು. ಮರುದಿನ ಸಕಾಲಕ್ಕೆ ಎದ್ದು ನರಸಿಂಹತೀರ್ಥದಲ್ಲಿ ಕುತೂಹಲ ಚಿತ್ತರಾಗಿ ಅನೇಕರು ಕಾದು ಕುಳಿತರು. ನರಸಿಂಹತೀರ್ಥದ ಈಶಾನ್ಯ ಮೂಲೆಯಲ್ಲಿ ಶುಭ್ರ ಗಂಗಾಜಲ ಅಂದು ಉಕ್ಕಿತಂತೆ! ಶಿಷ್ಯರು ಅಂದು ಅಲ್ಲಿಯೇ ಸ್ನಾನಮಾಡಿ ಗಂಗಾಸ್ನಾನ ಮಾಡಿದ ಧನ್ಯತೆಯನ್ನು ಪಡೆದರಂತೆ.

ಯದ್ವೃಂದಾವನ ಸೇವಯಾ ಸುವಿಮಲಾಃ<br>ವಿದ್ವಾನ್ ಪಶೂನ್ ಸಂತತಿಂ<br>ಧ್ಯಾನ ಜ್ಞಾನಮನಲ್ಪಕೀರ್ತಿ ನಿವಹಂ<br>ಪ್ರಾಪ್ನೋತಿ ಸೌಖ್ಯಂ ಜನಃ<br>ತಂ ವಂದೇ ನರಸಿಂಹತೀರ್ಥ ನಿಲಯಂ<br>ಶ್ರೀ ವ್ಯಾಸರಾಟ್ ಪೂಜಿತವ್<br>ಧ್ಯಾಯಂತಂ ಮನಸಾ ನೃಸಿಂಹ ಚರಣಂ<br>ಶ್ರೀಪಾದರಾಜಂ ಗುರುವ್

ಎಂದು ವ್ಯಾಸರಾಜರು ಶ್ರೀಪಾದರಾಜರನ್ನು ಕೊಂಡಾಡಿರುವರು. ಶ್ರೀಪಾದರಾಜರ ಮಹಿಮಾತಿಶಯಗಳನ್ನು ವರ್ಣಿಸುವ ವ್ಯಾಸ ರಾಜರ ಕೃತಿಯೊಂದು ಅವರ ಶಕ್ತಿಯನ್ನು ಗುರುತಿಸುವ ಐತಿಹಾಸಿಕ ದಾಖಲೆ ಎನ್ನಬಹುದು. 'ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ' ಎಂದು ಪ್ರಶ್ನಿಸುತ್ತಾ ಹೀಗೆ ಹೊಗಳಿದ್ದಾರೆ

ಮುತ್ತಿನ ಕವಚ ಮೇಲ್ಕುಲಾವಿ। ರತ್ನಕೆತ್ತಿದ<br>ಕರ್ಣಕುಂಡಲ<br>ಕಸ್ತೂರಿ ತಿಲಕ ಶ್ರೀಗಂಧಲೇಪನ ವಿಸ್ತಾರ<br>ದಿಂದ ಮೆರೆದುಬರುವ ॥<br>ವಿಪ್ರಹತ್ಯದೋಷ ಬರಲು। ಕ್ಷಿಪ್ರ ಶಂಖೋದ<br>ಕದಿ ಕಳೆಯೇ<br>ಅಪ್ರಬುದ್ಧರು ದೂಷಿಸೆ ಗೇರೆಣ್ಣೆ। ಕಪ್ಪು<br>ವಸನವ ಶುಭ್ರಮಾಡಿದ ॥<br>ಹರಿಗೆ ಸಮರ್ಪಿಸಿದ ನಾನಾ। ಪರಿಯ ಶಾಕ<br>ಗಳನು ಭುಂಜಿಸೆ<br>ನರರು ನಗಲು ಶ್ರೀಶಕೃಷ್ಣನ। ಕರುಣದಿಂದ<br>ಹಸಿಯ ತೋರಿದ ॥

'ಶ್ರೀಪಾದರಾಜರು ಹರಿಪಾದಾಂಬುಜ ಭೃಂಗರೂ, ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾ ಲೋಲರೂ, ಶರಣಜನ ಸುರಧೇನುವೂ ಸುಗುಣಾಂತರಂಗರೂ' ಆಗಿದ್ದರೆಂದು ವ್ಯಾಸರಾಜರು ಹೇಳಿದ್ದಾರೆ.

ಶ್ರೀಪಾದರಾಜರು ಕ್ರಿ.ಶ. ೧೪೮೦ರ(?)ವರೆಗೆ ಜೀವಿಸಿದ್ದರು. ತೊಂಭತ್ತೆಂಟು ವರ್ಷಗಳ ಕಾಲ ಬಾಳಿ ತಮ್ಮ ಜೀವನವನ್ನು ಇವರು ಸಾರ್ಥಕ ಪಡಿಸಿಕೊಂಡರಲ್ಲದೆ ಇತರರು ಉದ್ಧಾರವಾಗಲು ನೆರವು ನೀಡಿದರು ಇವರನ್ನು ಧ್ರುವಾಂಶರೆಂದು ಕೆಲವರು ಹೇಳುತ್ತಾರೆ. ಇವರ ವೃಂದಾವನ ಮುಳಬಾಗಿಲಿನಲ್ಲಿದೆ. ಪ್ರತಿವರ್ಷವೂ ಜ್ಯೇಷ್ಠ ಮಾಸದ ಶುಕ್ಲ ಪಕ್ಷದ ಚತುರ್ದಶೀ ದಿನ ಇಲ್ಲಿ ಶ್ರೀಪಾದರಾಜರ ಆರಾಧನೆ ಇಂದಿಗೂ ವೈಭವದಿಂದ ನಡೆಯುತ್ತಿದೆ.

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

## ಕಿಶೋರ ಜಗತ್




ರಾಜ ಉತ್ತಾನಪಾದನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ರಾಣಿಯ ರಿದ್ದರು. ಅವರಿಗೆ ಕ್ರಮವಾಗಿ ಸುನೀತಿ ಯಲ್ಲಿ ಧ್ರುವನು ಸುರುಚಿಯಲ್ಲಿ ಉತ್ತ ಮನೂ ಜನಿಸಿದರು. ರಾಜನಿಗೆ ಕಿರಿಯ ರಾಣಿ ಸುರುಚಿಯಯಲ್ಲಿ ಅತಿ ಪ್ರೇಮ.

ಒಂದು ದಿನ ಉತ್ತಾನಪಾದನು ಸುರುಚಿ ಯೊಡನೆ ಸಿಂಹಾಸನದಲ್ಲಿ ಕುಳಿತಿದ್ದನು. ಆಗ ಉತ್ತಮನು ತಂದೆಯ ತೊಡೆಯನ್ನೇರಿ ದನು. ಅದೇ ವೇಳೆಗೆ ಅಲ್ಲಿಗೆ ಬಂದ ಧ್ರುವನಿಗೆ ಸಿಂಹಾಸನದ ಮೇಲೆ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಬೇಕೆಂಬ ಆಸೆಯಾಯಿತು. ಧ್ರುವನು ತಂದೆಯ ಬಳಿಗೆ ಬಂದನು. ಅದನ್ನು ಕಂಡ ಸುರುಚಿ ಅಸೂಯೆಯಿಂದ ಧ್ರುವನ ರಟ್ಟೆ ಹಿಡಿದು ದರದರನೆ ಎಳೆದು ತಂದು ದ್ವಾರದ ಬಳಿ ಬಿಟ್ಟಳು.

ಬಾಲಕನು ಕಣ್ಣೀರು ಸುರಿಸುತ್ತಾ "ಏಕೆ ಚಿಕ್ಕಮ್ಮಾ ! ನಾನು ಸಿಂಹಾಸನವ ನ್ನೇರಬಾರದೆ?'' ಎಂದು ದೈನ್ಯದಿಂದ ಕೇಳಿದಾಗ, "ನನ್ನ ಹೊಟ್ಟೆಯಲ್ಲಿ ಹುಟ್ಟಿ ದಾಗ ಏರಬಹುದು'' ಎಂದಳು ಸುರುಚಿ. ಆಗ ಧ್ರುವನು "ಹಾಗಾದರೆ, ನಿನ್ನ ಹೊಟ್ಟೆ ಯಲ್ಲಿ ಹುಟ್ಟದ ಹೊರತು ಸಿಂಹಾಸನ ವನ್ನು ಹತ್ತುವಂತಿಲ್ಲವೆ, ಚಿಕ್ಕಮ್ಮಾ ?' ಎಂದು ವಿನಯವಾಗಿ ಪ್ರಶ್ನಿಸಿದ.

"ಅದನ್ನು ದೇವರನ್ನು ಕೇಳು ಹೋಗು'' ಎಂದು ಸುರುಚಿ ಒಳ ಹೊರಟಳು.

ಬಾಲಕ ಧ್ರುವನು ಅಂತಃಪುರಕ್ಕೆ ಹೋಗಿ ನಡೆದ ಸಂಗತಿಯನ್ನೆಲ್ಲ ತನ್ನ ತಾಯಿಯೊ ಡನೆ ಅಳುತ್ತಾ ತಿಳಿಸಿ ಪಾದಗಳಿಗೆ ನಮಸ್ಕರಿ ಸಿದ. ತಾಯಿ ಅವನನ್ನು ಸಮಾಧಾನ ಪಡಿಸಿದಳು. ಧ್ರುವನು "ಅಮ್ಮಾ! ದೇವರು ಎಲ್ಲಿದ್ದಾನಮ್ಮಾ! ಅವನನ್ನು ನಾನು ಕಾಣಬಹುದೇ?" ಎಂದು ಪ್ರಶ್ನಿ ಸಿದನು.

"ಅವನು ಎಲ್ಲೆಲ್ಲೂ ಇದ್ದಾನಪ್ಪ. ಭಕ್ತಿ ಯಿಂದ ನಿಶ್ಚಲವಾದ ಮನಸ್ಸಿನಿಂದ ಪ್ರಾರ್ಥಿಸಿದರೆ ದೇವರನ್ನು ಕಾಣಲು ಸಾಧ್ಯ ಮಗು" ಎಂದು ಉತ್ತರಿಸಿದಳು ತಾಯಿ.

"ಹಾಗಾದರೆ ನಾನು ದೇವರನ್ನು ನೋ ಡಲು ಹೋಗುತ್ತೇನೆ, ನನ್ನನ್ನು ಹರಸು" ಎಂದು ತಾಯಿಯ ಪಾದಗಳಿಗೆ ನಮಸ್ಕರಿಸಿ ದನು.

ಮಗನ ನಿರ್ಧಾರವನ್ನು ಕಂಡು ಸುನೀ ತಿಗೆ ಆಶ್ಚರ್ಯ ಸಂತೋಷಗಳೆರಡೂ ಆದವು, ಭಕ್ತಿಯಿಂದ ನಮಸ್ಕರಿಸಿದ ಮಗನನ್ನು ತುಂಬು ಹೃದಯದಿಂದ ಹರಸಿ ಕಳುಹಿಸಿ ಕೊಟ್ಟಳು.

ತಾಯಿಯ ಹರಕೆಯೊಡನೆ ಐದು ವರ್ಷದ ಹಸುಳೆ ಅರಣ್ಯದ ಹಾದಿ ಹಿಡಿದು ಹೊರಟನು. ದಾರಿಯಲ್ಲಿ ನಾರದರು ಎದು ರಾದರು. ಅವರಿಗೆ ನಮಸ್ಕರಿಸಿ ಭಗವಂತನ ನೆಲೆ ತಿಳಿಸಬೇಕೆಂದು ಪ್ರಾರ್ಥಿಸಿದನು, ನಾರದರು ಪ್ರೀತಿಯಿಂದ ತಲೆ ನೇವರಿಸುತ್ತಾ "ಮಗು ! ದೇವರು ದಯಾಮಯ. ಅವ ನಿಗೆ ಮುದ್ದಾದ ಗಲ್ಲ. ಮನೋಹರವಾಗ ಕೆನ್ನೆ, ಸಂಪಿಗೆ ಎಸಳಿನಂತಹ ಮೂಗು. ಕೋಮಲವಾದ, ಮುಂಗುರಳು ಮತ್ತು ಹೊಳಪಾದ ನಯನಗಳಿವೆ. ಕೊರಳಲ್ಲಿ ತುಳಸೀ ಮಾಲೆ, ನಾಲ್ಕು ಕೈಗಳಲ್ಲಿಯೂ ಶಂಖ, ಚಕ್ರ, ಗದೆ, ಪದ್ಮ. ಕರ್ಣದಲ್ಲಿ ಕುಂಡಲ ಮತ್ತು ಎದೆಯಲ್ಲಿ ಕೌಸ್ತುಭ ಮಣಿಯನ್ನು ಧರಿಸಿದ್ದಾನೆ. ಹತ್ತಿರದ ಲ್ಲಿಯೇ ಯಮುನಾನದಿ ಹರಿಯುತ್ತಿದೆ. ಧ್ಯಾನಮಾಡಲು ಯಮುನಾ ತೀರವು ಪ್ರಶಾಂತವಾಗಿದೆ. ಅಲ್ಲಿ ಕುಳಿತು ಒಂದೇ ಮನಸ್ಸಿನಿಂದ ಭಗವಂತನನ್ನು ಧ್ಯಾನಿಸು" ಎಂದು ಹೇಳಿ ಆಶೀರ್ವದಿಸಿ ಕಳುಹಿಸಿ ಕೊಟ್ಟರು. ಧ್ರುವನು ಅವರ ಆದೇಶದಂತೆ ಯಮುನಾ ನದಿಯ ಕಡೆಗೆ ಹೊರಟನು.

ಇತ್ತ ರಾಜ ಉತ್ತಾನುಪಾದನು ಆಸ್ಥಾ ನಕ್ಕೆ ಬಂದ ನಾರದರೊಡನೆ "ಕಿರಿಯ

**ಶ್ರೀ ಎನ್. ಆರ್. ಶ್ರೀನಿವಾಸನ್**

ರಾಣಿಯ ಮಾತಿಗೆ ಮರುಳಾಗಿ ಮಗನ ಕೋಮಲವಾದ ಮನಸ್ಸು ನೋಯಿಸಿದೆ, ನನ್ನಂತಹ ನಿರ್ಭಾಗ್ಯ ತಂದೆ ಯಾರಿದ್ದಾರೆ? ನನ್ನಮಗ ಕಾಡಿನಲ್ಲಿ ಎಲ್ಲಿ ಅಲೆಯುತ್ತಿರುವನೋ, ಯಾವ ಕ್ರೂರ ಮೃಗದ ಬಾಯಿಗೆ ತುತ್ತಾದನೋ ಕಾಣೆ!'' ಎಂದು ಹಲುಬಿದನು. ನಾರದರು “ ನಿನ್ನ ಮಗ ಶಿಶುವಾದರೂ ಸಾಹಸಿ, ಶಾಶ್ವತವಾದ ಪದವಿಯನ್ನು ಪಡೆಯುವನು- ಚಿಂತಿಸಬೇಡ'' ಎಂದು ಸಮಾಧಾನಪಡಿಸಿ ಹೊರಟು ಹೊದರು.

ಧ್ರುವನು ಅಡವಿಯಲ್ಲಿ ಅಲೆಯುತ್ತಾ ಮಂಜುಳ ನಿನಾದದಿಂದ ಗಂಭೀರವಾಗಿ ತುಂಬಿ ಹರಿಯುತ್ತಿದ್ದ ಯಮುನೆಯನ್ನು ಕಂಡನು. ನದಿಯ ಇಕ್ಕೆಲದಲ್ಲಿಯೂ ಸೊಂಪಾಗಿ ಬೆಳೆದು ನಿಂತಿರುವ ಮರಗಳು, ಮರಗಳನ್ನು ಎಡೆಬಿಡದೆ ಸುತ್ತಿಕೊಂಡು ಮನೋಹರವಾಗಿ ಬೆಳೆದಿರುವ ಲತೆಗಳು, ಲತೆಗಳಲ್ಲಿ ಪಂಜು ಹಚ್ಚಿದಂತೆ ಕೆಂಪಾದ ಪುಷ್ಪರಾಶಿ. ಪುಷ್ಪಗಳ ಮೇಲೆ ಕುಳಿತು ಝೇಂಕರಿಸುವ ದುಂಬಿಗಳು, ಮಧುರವಾದ ಪಕ್ಷಿ ಕೂಜನ, ಇದನ್ನೆಲ್ಲ ಕಂಡು ದೇವರ ಧ್ಯಾನಕ್ಕೆ ಅದೇ ಯೋಗ್ಯವಾದ ಸ್ಥಳವೆಂದು ಬಾಲಕನ್ನು ನಿಶ್ಚಯಿಸಿದನು ಯಮುನೆಯ ದಡದಲ್ಲಿದ್ದ ವೃಕ್ಷ ವೊಂದರ ಕೆಳಗೆ ಕುಳಿತು ಧ್ಯಾನಾಸಕ್ತನಾದನು.

ಧ್ರುವನ ಮುಗ್ಧ ಭಕ್ತಿಗೆ ವಿಷ್ಣುವು ಸುಪ್ರೀತನಾಗಿ ಪ್ರತ್ಯಕ್ಷನಾದನು ದರಿದ್ರನು ಧನವನ್ನು ಕಂಡಂತೆ ಧ್ರುವನು ಆನಂದ ಪರವಶನಾದನು. ಭಯ ಆನಂದಗಳೆರಡೂ ಒಮ್ಮೆಲೆ ಅವನಿಗಾಯಿತು. ಹರಿಯ ಚರಣಾರವಿಂದಗಳಿಗೆ ವಂದಿಸಿದನು. ಮನಸಾರೆ ಹೊಗಳ ಬೇಕೆನಿಸಿದರೂ ಆತ್ಮಾನಂದದಿಂದ ಮೂಗನಾಗಿ ನೋಡುತ್ತ ನಿಂತನು. ಅವನ ಈ ಸ್ಥಿತಿಯನ್ನು ಕಂಡು ನಾರಾಯಣನು ತನ್ನ ಶಂಖದಿಂದ ಧ್ರುವನನ್ನು ಸವರಿದನು. ಕೂಡಲೆ ಬಾಲಕನು ಮುಕುಂದನನ್ನು ಮುಕ್ತ ಕಂಠದಿಂದ ಹೊಗಳಲಾರಂಭಿಸಿದನು. “ಕರುಣಾಕರ! ನೀನು ಬೇಡಿದವರ ಕಲ್ಪ ವೃಕ್ಷ. ನಿನ್ನ ಭಕ್ತರ ಸಂಗವನ್ನು ದಯಪಾಲಿಸು, ಸತ್ಪುರುಷರ ಸಹವಾಸ ವನ್ನು ಅನುಗ್ರಹಿಸು, ದಿವ್ಯ ಮತಿಯನ್ನು ಕೊಡು. ಸದಾಚಾರ ಮತ್ತು ಸತ್ಕಾರ್ಯಗಳಲ್ಲಿ ಸದಾ ನಿರತನಾಗಿರುವಂತೆ ಮಾಡು. ನಾನು ನಿನಗೆ ಶರಣಾಗಿದ್ದೇನೆ. ಆಕಳು ಕರುವನ್ನು ಎಡಬಿಡದೆ ಸಲಹುವಂತೆ ಕಾಪಾಡು ನನ್ನನ್ನು'' ಎಂದು ಪ್ರಾರ್ಥಿಸಿದನು.

ಸೂರ್ಯ ಚಂದ್ರಾದಿಗಳಿಗೂ ಮಿಗಿಲಾದ ಧ್ರುವ ಪದವನ್ನು ರಾಜ್ಯ ಪದವಿಯನ್ನು ಧ್ರುವನಿಗೆ ಅನುಗ್ರಹಿಸಿ ಭಗವಂತನ ಮಾಯವಾದನು

“ಆಯ್ಯೋ! ಭಗವಂತನೇ ನನ್ನ ಬಳಿಗೆ ಬಂದರೂ ಪರಮಪದವಿಯನ್ನು ಬೇಡದೆ ನಶ್ವರವಾದ ರಾಜ್ಯ ಪದವಿಯನ್ನು ಪಡೆದೆನಲ್ಲಾ! ನಾನೆಂತಹ ಅಜ್ಞಾನಿ. ಭಗವಂತನ ಬಳಿಗೆ ಬಂದಾಗ ಬೊಗಸೆ ಭತ್ತವನ್ನು ಬೇಡಿದಂತಾಯಿತಲ್ಲಾ ನನ್ನ ಬದುಕು! ಎಂದು ಧ್ರುವನು ಮರುಗಿದನು.

ಧ್ರುವನು ರಾಜ್ಯಕ್ಕೆ ಹಿಂತಿರುಗಿದನು. ತಂದೆಯು ಮಗನನ್ನು ವಿಜೃಂಭಣೆಯಿಂದ ಅರಮನೆಗೆ ಕರೆದೊಯ್ದನು. ತನ್ನನ್ನು ಹರಸಿದ ಜನರಿಗೆ ತಲೆಬಾಗಿ, ತಂದೆ ತಾಯಿಗಳಿಗೆ ವಂದಿಸಿದನು. ಗುರಿ ಸಾಧಿಸಿ ಹಿಂದಿರುಗಿದ ಮಗನನ್ನು ಸುನೀತಿಯು ಅತ್ಮಾದರದಿಂದ ಅಲಿಂಗಿಸಿಕೊಂಡಳು. ಮಲತಾಯಿ ಸುರುಚಿಯು ಧ್ರುವನ ಮನಸ್ಸನ್ನು ನೋಯಿಸಿದುದಕ್ಕಾಗಿ ಪಶ್ಚಾತ್ತಾಪ ಪಟ್ಟಳು.

ಉತ್ತಾನಪಾದನ ನಂತರ ಧ್ರುವನು ಪಟ್ಟಾಭಿಷಿಕ್ತನಾದನು ಅನೇಕ ವರ್ಷಗಳ ಕಾಲ ಧರ್ಮದಿಂದ ರಾಜ್ಯಭಾರ ಮಾಡಿದನು. ಮರಣಾನಂತರ ನಕ್ಷತ್ರ ಲೋಕದ ಶಾಶ್ವತ ಪದವಿಯನ್ನು ಪಡೆದವನು.

ನಾವು ಇಂದಿಗೂ ಉತ್ತರ ದಿಕ್ಕಿನಲ್ಲಿ ಧ್ರುವ ನಕ್ಷತ್ರವನ್ನು ಕಾಣುತ್ತೇವೆ.

---

( ೪ನೇ ಪುಟದಿಂದ )

ರಾಜರ ಮತ್ತು ಅವರ ಅನುಯಾಯಿಗಳು ಪ್ರೋತ್ಸಾಹದಿಂದ ದೇವಸ್ಥಾನದಲ್ಲಿ ನಡೆಯುತ್ತಿದ್ದ ಎರಡು–ಮೂರು ಉತ್ಸವಗಳು ೨ ಶತಮಾನಗಳ ಕಾಲದಲ್ಲಿ ಯಥೇಚ್ಛವಾಗಿ ಬೆಳೆದವು. ಪವಿತ್ರೋತ್ಸವ, ಕಲ್ಯಾಣೋತ್ಸವ, ಡೋಲೋತ್ಸವ, ತೆಪ್ಪೋತ್ಸವ ಮೊದಲಾದ ಅನೇಕ ಪ್ರಾಸಂಗಿಕೋತ್ಸವಗಳು, ಬಹುಸಂಖ್ಯೆಯ ಬ್ರಹ್ಮೋತ್ಸವಗಳು ನಡೆಯಲಾರಂಭಿಸಿದುವು. ದೇವರಿಗೆ ಒಪ್ಪಿಸುವ ನಿವೇದನ ವಸ್ತುಗಳು ಅಸಂಖ್ಯಾತವಾದುವು. ಇತರ ದೇವಾಲಯಗಳಲ್ಲಿ ನಿವೇದನದ ಸಂಧಿಕಾಲಗಳು ಮೂರಾಗಿದ್ದರೆ ತಿರುಮಲೆಯಲ್ಲಿ ಸುಪ್ರಭಾತ, ತಿರುಮುಡಿ ವಳಕ್ಕ, ತೋಮಾಲೆ, ಅರ್ಧಯಾಮ ಮೊದಲಾದ ೩೦ ಸಂಧಿಗಳು ಏರ್ಪಟ್ಟವು ದೇವರುಗಳಿಗೆ ಒಪ್ಪಿಸುವ ನೈವೇದ್ಯದಲ್ಲಿ ವೈವಿಧ್ಯ ಉಂಟಾಗಿ ಅವನ್ನು ವಿನಿಯೋಗ ಮಾಡುವ ಕ್ರಮವು ನಿರ್ದಿಷ್ಟವಾಯಿತು ಮೊದಲು ಬಹು ಸರಳವಾಗಿದ್ದ ನಿವೇದನದ ಪಟ್ಟಿ ಬಹು ದೀರ್ಘವಾಯಿತು. ನಿತ್ಯ ಸಂಧಿಗಳಲ್ಲಿಯೂ ವಿಶೇಷೋತ್ಸವಗಳಲ್ಲಿಯೂ ಸಿದ್ಧಪಡಿಸಬೇಕಾದ ಪದಾರ್ಥಗಳು ಬಹು ಆಕರ್ಷಕವಾದವು ಅತಿರಸ, ಅಪ್ಪ, ಚರುದೋಸೆ, ಎಳ್ಳುಂಡೆ, ಇಡ್ಲಿ, ಪಟ್ಟಣ ದೋಸೆ, ಕಡಲೆ ಶುಂಡಲ್, ಮನೋಹರ ಪಡಿ, ಪೊಂಗಲ್ ಪಡಿ, ಪೊರಿವಿಳಂಗಾಯ್, ತಿರುಪ್ಪಾವಡೈ, ತಿರುಪ್ಪಣ್ಯಾರಂ; ವಡೆಪರುಪ್ಪು, ಉಳುಂದು ಮೊಹರೈ, ಸುಖಿಯನ್, ತಿರುಕ್ಕಣ್ಣಮಿದು, ಮನೋಹರಂ, ವಾಯುಪ್ಪಡಿ ಇತ್ಯಾದಿ ಅಸಂಖ್ಯೆಯ ಮಾದರಿಯ ನಿವೇದನಗಳು ರೂಢಿಗೆ ಬಂದುವು ಇವುಗಳೆಲ್ಲಕ್ಕೂ ಭಕ್ತಾದಿಗಳು ಪ್ರತ್ಯೇಕವಾಗಿ ದತ್ತಿಯನ್ನು ಬಿಟ್ಟಿದ್ದಾರೆ. ದೇವರಿಗೆ ದತ್ತಿ ಬಿಡುವುದು ಒಂದು ಸಂಪ್ರದಾಯವೂ, ದೊಡ್ಡಸ್ತಿಕೆಯೂ ಆಗಿ ಪರಿಣಮಿಸಿ ಪ್ರತಿಯೊಬ್ಬರೂ ಸ್ತ್ರೀಪುರುಷರೆನ್ನದೆ, ಬಡವಬಲ್ಲಿದರೆನ್ನದೆ ಯಥಾಶಕ್ತಿ ದೇವಸ್ಥಾನಕ್ಕೆ ಸೇವೆ ಸಲ್ಲಿಸುವ ಪರಿಪಾಟಿಯಾಯಿತು.

ಇವುಗಳ ಫಲವಾಗಿ ಭಕ್ತಾದಿಗಳ ಸಂಖ್ಯೆಯೂ ಹೆಚ್ಚಾಯಿತು. ಅವರುಗಳಿಗೆ ಅಶನ ವಸತಿಯನ್ನು ಕಲ್ಪಿಸುವುದು ಒಂದು ಸೇವೆಯೆಂದು ಪರಿಗಣಿತವಾಯಿತು. ಇವುಗಳ ಮೇಲ್ವಿಚಾರಣೆಗಾಗಿ 'ಕೋವಿಲ್‌ಕೇಳ್ವಿ'ಗಳೆಂಬ ಅಧಿಕಾರಿವರ್ಗದವರು ನೇಮಕವಾದರು. ಕಣಕ್‌ಪಿಳ್ಳೈಗಳು, ಕರಣಿಕರು, ಶಾಲೈಮಾರರು (ಉಗ್ರಾಣದವರು), ಶಿಂಗಮಾರರು, (ಸೌದೆಯನ್ನು ಸಿದ್ಧಪಡಿಸುವವರು) ಶೀವೈಯಾಳರು (ಅಡಿಗೆಯವರು) ಕುಂಬಾರರು–ಎಂಬ ಒಂದು ದೊಡ್ಡ ಸಿಬ್ಬಂದಿಯ ವರ್ಗವು ಸ್ಥಾಪಿತವಾಯಿತು. ದೇವಸ್ಥಾನದ ಆಡಳಿತಕಾರ್ಯ ಬಹು ಜಟಿಲವಾಗುತ್ತಾ ಬಂದಿತು.

ಗೋವಿಂದರಾಜ ಪಟ್ಟಣವು ಬಹು ಉಚ್ಛ್ರಾಯಸ್ಥಿತಿಗೆ ಬಂದಿತು. ಅಲ್ಲಿ ಅಗ್ರಹಾರವು ನಿರ್ಮಾಣವಾಯಿತು. ಆಳ್ವಾರ್ ಆಚಾರ್ಯರುಗಳಿಗೆ ಸಂಬಂಧಪಟ್ಟಹಾಗೆ ಅಧ್ಯಯನೋತ್ಸವಗಳು, ಶಾತ್ತುಮುರೈಗಳು, ಪವಿತ್ರೋತ್ಸವಗಳು ನಾನಾಮುಖವಾಗಿ ಬೆಳೆದುವು. ಸಾಳುವರು ಈ ದೇವಸ್ಥಾನಕ್ಕೆ ತಿರುಮಲೆಗಿಂತ ಹೆಚ್ಚು ಸೇವೆ ಸಲ್ಲಿಸಿದ್ದಾರೆ

ಮುಂದೆ ವಿಜಯನಗರದ ಅರಸನಾದ ಕೃಷ್ಣದೇವರಾಯನು ತಿರುಮಲೆಗೆ ಮಾಡಿದ ಸೇವೆ ಅನನ್ಯಾದೃಶ್ಯವಾದುದು. ಆದರೆ ಅವನು ಅದೇ ರೀತಿ ಗೋವಿಂದರಾಜನಿಗೆ ಸಲ್ಲಿಸಿರುವಂತೆ ಕಾಣುವುದಿಲ್ಲ. ತಿರುವೆಂಗಡನೇ ಅವನ ಏಕೈಕ ಆರಾಧ್ಯ ಮೂರ್ತಿ. (ಅವನ ಔದಾರ್ಯವು ಇತರ ದೇವಾಲಯಗಳಲ್ಲಿಯೂ ಪ್ರದರ್ಶಿತವಾಗಿದೆ) ಅವನು ತನ್ನ ಪ್ರಾರಂಭದ ೧೧ ವರ್ಷದ ಆಳ್ವಿಕೆಯ ಕಾಲದಲ್ಲಿ ೭ (ಏಳು) ಸಲ ತಿರುಮಲೆಗೆ ಬಂದು ವೆಂಕಟೇಶನನ್ನು ಸಂದರ್ಶನ ಮಾಡಿ ತನ್ನ ಇಬ್ಬರು ರಾಣಿಯರೊಂದಿಗೆ ವೆಂಕಟೇಶನಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾನೆ. ಅವನು ೬ ಗ್ರಾಮಗಳನ್ನೇ ಅಲ್ಲದೆ ಬಹು ಬೆಲೆಬಾಳುವ ಕಿರೀಟ, ಪ್ರಭಾವಳಿ, ಕಂಠೀಸರ, ಪೀತಾಂಬರ ಮೊದಲಾದವುಗಳನ್ನು ಸಮರ್ಪಿಸಿದ್ದಾನೆ. ತನ್ನ ಶಾಸನದಲ್ಲಿ ಕೃಷ್ಣದೇವರಾಯನು ತಾನು ಸಮರ್ಪಿಸುವ ಆಭರಣಗಳಲ್ಲಿ ಇರುವ ನವರತ್ನ ಮತ್ತು ಚಿನ್ನದ ವಿವರಗಳನ್ನು ಕೊಟ್ಟಿದ್ದಾನೆ. ಈಗಿನ ಕಾಲಕ್ಕೆ ಅದು ಒಂದು ಕೋಟಿ ರೂಪಾಯಿನ ಬೆಲೆಯಾಗಬಹುದು. ಕೃಷ್ಣದೇವರಾಯನು ಗರ್ಭಗೃಹದ ವಿಮಾನಕ್ಕೆ ೩೦ ಸಾವಿರ ವರಹಗಳ ಖರ್ಚಿನಲ್ಲಿ ಚಿನ್ನದ ಮುಲಾಮನ್ನು ಮಾಡಿಸಿದ್ದಾನೆ. ದೇವರಿಗೆ ಕನಕಾಭಿಷೇಕವನ್ನು ಮಾಡಿಸಿದ್ದಾನೆ. ಇವನ ಅಧಿಕಾರಿಗಳು, ಅನುಯಾಯಿಗಳು, ತಮಗಾಗಿಯೂ ಮತ್ತು ತಮ್ಮ ರಾಜರಿಗಾಗಿಯೂ ವೆಂಕಟೇಶನಿಗೆ ವಿವಿಧರೀತಿಯ ಸೇವೆಯನ್ನು ಸಲ್ಲಿಸಿದ್ದಾರೆ.

ಇದೇ ಕಾಲದಲ್ಲಿ ತಾಳ್ಳಪಾಕಂ ವಾಗ್ಗೇಯಕಾರರಾದ ಅನ್ನಮಾಚಾರ್ಯ, ಪೆದ್ದ ತಿರುಮಲಾಚಾರ್ಯ ಮತ್ತು ಚಿನ್ನಣ್ಣನವರು (ತಂದೆ, ಮಗ, ಮೊಮ್ಮಗ) ೯೦೦೦ ಸಂಕೀರ್ತನಗಳನ್ನು ರಚಿಸಿ ಅವನ್ನು ३೦೦೦ ತಾಮ್ರಫಲಕಗಳಲ್ಲಿ ಕೆತ್ತಿಸಿ ಸಂಕೀರ್ತನ ಭಂಡಾರವೆಂಬ ಒಂದು ಕೊಠಡಿಯಲ್ಲಿ ಇರಿಸಿದ್ದಾರೆ. ಪೆದ್ದತಿರುಮಲಾಚಾರ್ಯರು ದೇವಾಲಯಕ್ಕೆ ವಿಶೇಷ ಸೇವೆ ಸಲ್ಲಿಸಿದ್ದಾರೆ.



ರಾಜರುಗಳಿಂದ ಗ್ರಾಮಗಳನ್ನು ಪಡೆದು ದೇವಾಲಯದ ನಿತ್ಯಪೂಜೆಗಾಗಿ ದಾನ ಮಾಡಿದ್ದಾರೆ. ರಾಜರು ಮತ್ತು ಅವರ ಅಧಿಕಾರಿಗಳಿಗೆ ಸಲ್ಲಬೇಕಾದ ಪ್ರಸಾದವನ್ನು ತಮ್ಮ ಸ್ವಂತ ಹಣದಿಂದ ಬಹುಬೆಲೆಯನ್ನು ಕೊಟ್ಟು ಮಠ ಮತ್ತು ಛತ್ರಗಳಿಗೆ ಕೊಟ್ಟಿದ್ದಾರೆ. ತೆಪ್ಪಕೊಳದ ಸೋಪಾನವನ್ನು ಅಳವಡಿಸಿ ಅದರ ಮಧ್ಯದಲ್ಲಿ ಮಂಟಪವನ್ನು ಕಟ್ಟಿಸಿ ಅದರ ಪಕ್ಕದಲ್ಲಿರುವ ಆದಿವರಾಹಸ್ವಾಮಿ ಸನ್ನಿಧಿಗೆ ಪ್ರಾಕಾರವನ್ನೂ ಪ್ರದಕ್ಷಿಣಪಥವನ್ನೂ ನಿರ್ಮಿಸಿದ್ದಾರೆ. ಹೊಸ ತಿರುಕ್ಕುಡಿ ಉತ್ಸವವನ್ನು ಏರ್ಪಡಿಸಿದ್ದಾರೆ.

# ನಾಳೆ ಮಾಡುವುದನಿಂದೇ ಮಾಡಿ
# ಇಂದು ಮಾಡುವುದನೀಗಲೇ ಮಾಡಿ

( ಮಹಾಭಾರತ 12 – 6534 )

## ಕಾಲ ತರಂಗವಾರಿಗೂ ಕಾಯದು
## ಉಳಿತಾಯ ಮಾಡಲಿದುವೆ ಸುಸಮಯ

**ನಮ್ಮ ಬ್ಯಾಂಕ್‌ನ ಸುಪ್ರಸಿದ್ಧ ಬಹುಮುಖ ಉಳಿತಾಯ ಯೋಜನೆಗಳಲ್ಲಿ**
**ತಮ್ಮ ಹಣವನ್ನು ಕೂಡಿಸಿರಿ.**

**ತಮ್ಮ ಅಗತ್ಯಗಳ ಪೂರೈಕೆಗೆ ಈ ಉಳಿತಾಯ ಬಳಕೆಗೆ ಬರುವಂತೆ ನಾವು ಮಾಡುತ್ತೇವೆ.**

ಹೆಚ್ಚಿನ ವಿವರಗಳಿಗಾಗಿ:

**ನಮ್ಮ ಯಾವುದೇ ಶಾಖೆಯನ್ನು ಸಂದರ್ಶಿಸಿ ಅಥವಾ ಬರೆಯಿರಿ.**

# ದಿ ಕರೂರ್ ವೈಶ್ಯ ಬ್ಯಾಂಕ್ ಲಿಮಿಟೆಡ್

ನೊಂದಾಯಿತ ಕೇಂದ್ರ ಕಚೇರಿ : ಜವಹರ್ ಬಜಾರ್,

## ಕರೂರ್ ೬೩೯೦೦೧



**ತಮ್ಮನ್ನು ಅಭಿವೃದ್ಧಿಯತ್ತ ಕರೆದೊಯ್ಯುವ ಬ್ಯಾಂಕ್**

ಜಿ. ವೆಂಕಟೇಶಂ,
ಛೇರ್ಮನ್.

ಸಪ್ತ/ಗಿ೦

ಇದಕ್ಕಾಗಿ ಪ್ರತ್ಯೇಕ ಗ್ರಾಮಗಳನ್ನು ದಾನ ಮಾಡಿದ್ದಾರೆ. ಹೊಸತೇರನ್ನು ಕಟ್ಟಿಸಿರುವುದಲ್ಲದೆ ದೀಪಸ್ತಂಭಗಳನ್ನು ಸ್ಥಾಪಿಸಿದ್ದಾರೆ. ಆಳ್ವಾರ್ ತೀರ್ಥದ ಬಳಿ ನಮ್ಮಾಳ್ವಾರ್ ಸನ್ನಿಧಿಯನ್ನು ಸ್ಥಾಪಿಸಿ ಅಲ್ಲಿ ಅಧ್ಯಯನೋತ್ಸವಕ್ಕೆ ವ್ಯವಸ್ಥೆ ಮಾಡಿಸಿದ್ದಾರೆ. ಸಂಕೀರ್ತನೆಗಳನ್ನು ಹಾಡಲು ಬ್ರಾಹ್ಮಣರನ್ನು ಗೊತ್ತುಮಾಡಿದವರು ಇವರೇ. ಇವರ ಮಕ್ಕಳಾದ ಚಿನ್ನಣ್ಣನು ತಿರುಚಾನೂರಿನಲ್ಲಿ ತಿರುವೇಂಗಡ ದೇವಾಲಯವನ್ನು ಕಟ್ಟಿಸಿ ಅಲ್ಲಿ ಆಳ್ವಾರಾಚಾರ್ಯರನ್ನು ಸ್ಥಾಪಿಸಿ ಅವರ ಉತ್ಸವಾದಿಗಳಿಗೆ ಸೂಕ್ತ ಸೌಲಭ್ಯವನ್ನು ಕಲ್ಪಿಸಿದ್ದಾರೆ. ಬೆಟ್ಟದಲ್ಲಿ ಮತ್ತು ಗೋವಿಂದರಾಜರ ಸನ್ನಿಧಿಯಲ್ಲಿ ಕಲ್ಯಾಣೋತ್ಸವವನ್ನು ಇವರೇ ಪ್ರಾರಂಭಿಸಿದವರು ಈ ಉತ್ಸವವು ಈಗ ಬಹು ಜನಪ್ರಿಯವಾಗಿದೆ.

ಕೃಷ್ಣದೇವರಾಯನಾದ ಮೇಲೆ ವಿಜಯನಗರದ ರಾಜನಾದ ಅಚ್ಯುತರಾಯನಿಗೆ ತಿರುಮಲೆಯ ವಿಷಯದಲ್ಲಿ ಇನ್ನೂ ಹೆಚ್ಚಿನ ಉತ್ಸಾಹ. ಈತನು ಶ್ರೀ ವೈಷ್ಣವರ ಅಚ್ಚಿನ್ನ ಶಿಷ್ಯ. ಅವರ ಪ್ರಭಾವದಿಂದ ಮೇಲುಬೆಟ್ಟದಲ್ಲಿ ಎಂದೂ ಇಲ್ಲದ ಉತ್ಸವಗಳನ್ನು ಏರ್ಪಡಿಸಿದನು. ದೇವರಿಗೆ ತನ್ನ ಕೈಯಿಂದಲೇ ಸಹಸ್ರನಾಮಾರ್ಚನೆಯನ್ನು ಅರ್ಚಕರು ನಾಮಾವಳಿಗಳನ್ನು ಪರಿಸುತ್ತಿರುವಾಗ ಮಾಡಿದನು. ಇಲ್ಲಿಯವರೆಗೆ ಯಾವ ಭಕ್ತರೂ ಮೂಲಮೂರ್ತಿಯನ್ನು ಸ್ವತಃ ಸ್ಪರ್ಶಮಾಡಿ ಪೂಜೆಮಾಡಿರಲಿಲ್ಲ. ಇವನು ಅನೇಕ ಬೆಲೆಬಾಳುವ ಆಭರಣಗಳನ್ನು ಎಂದರೆ ನೂರಾರು ಮುತ್ತು, ವಜ್ರ, ಪಚ್ಚೆಗಳಿಂದ ಕೂಡಿದ ಕವಚ, ಕಠಾರಿ, ತಲೆವಣಿ, ಕೈಬಳೆ, ಸರಗಳು ಮೊದಲಾದವುಗಳನ್ನು ಸಹಸ್ರನಾಮಾರ್ಚನೆಯ ಮೊದಲೇ ಅರ್ಪಿಸಿದ್ದಾನೆ.

ಇದಕ್ಕಿಂತಲೂ ಮುಖ್ಯವಾದ ಸೇವೆ ಅವನು ನಡೆಸಿದ ಲಕ್ಷ್ಮೀ ಉತ್ಸವ. ಏಕಭೇರ ಪ್ರಧಾನವಾದ ವೈಖಾನಸದೇವಾಲಯದಲ್ಲಿ ಲಕ್ಷ್ಮೀದೇವಿಗೆ ಸ್ಥಳವಿರಲಿಲ್ಲ. ಹೃದಯಸ್ಥ ಲಕ್ಷ್ಮಿಯು ಶ್ರೀ ರಾಮಾನುಜರ ಕಾಲದಿಂದ ಕಾಣಬಹುದಾಗಿತ್ತು. ಅಚ್ಯುತರಾಯನು ಹೊಸದಾಗಿ ಚಿನ್ನದಲ್ಲಿ ಲಕ್ಷ್ಮೀದೇವಿಯ ವಿಗ್ರಹವನ್ನು ಮಾಡಿಸಿ ಅವಳಿಗಾಗಿ ಏಳು ಮಂಟಪಗಳನ್ನು ಕಟ್ಟಿಸಿ ಏಳು ದಿನಗಳ ವಿಭವೋತ್ಸವಗಳನ್ನು ಏರ್ಪಡಿಸಿದನು. ಗೋವಿಂದರಾಜಪುರದಲ್ಲಿ ಚಕ್ರತೀರ್ಥವನ್ನು ಜೀರ್ಣೋದ್ಧಾರ ಮಾಡಿದನು. ಅಚ್ಯುತರಾಜಪುರವನ್ನು ಸ್ಥಾಪಿಸಿ ಅಚ್ಯುತ ಪೆರುಮಾಳ್ ಕೋಯಿಲನ್ನು ನಿರ್ಮಿಸಿ ಸಂಬಂಧಪಟ್ಟ ಉತ್ಸವಗಳೆಲ್ಲವನ್ನೂ ಏರ್ಪಡಿಸಿದನು ಆದರೂ ಅವನು ಗೋವಿಂದರಾಜನಿಗೆ ಯಾವ ಸೇವೆಯನ್ನೂ ಮಾಡಿದಂತೆ ಕಾಣುವುದಿಲ್ಲ ಅಚ್ಯುತರಾಯನೇ ಗೋವಿಂದರಾಜನಿಗೂ ಬೆಟ್ಟದ ಮೇಲೆಯೂ ಸ್ಥಿರವಾಗಿ ದೇವದಾಸಿಯರ ಸೇವೆಗೆ ಏರ್ಪಡಿಸಿದನು. ಇಂತಹವರಲ್ಲಿ ಅನೇಕರು ದೇವಸ್ಥಾನಕ್ಕೆ ಅಮೋಘವಾದ ಸೇವೆಗಳನ್ನು ಸಲ್ಲಿಸಿದ್ದಾರೆ

ಅಚ್ಯುತರಾಯನಾದ ಮೇಲೆ ಅರವೀಡು ಮನೆತನದವರ ಕಾಲಕ್ಕೆ ವಿಜಯನಗರ ರಾಜ್ಯ ಹೀನಸ್ಥಿತಿಗೆ ಬಂದುದರಿಂದ ಆ ವಂಶದ ರಾಮರಾಯ, ತಿರುಮಲರಾಯ, ಶ್ರೀರಂಗರಾಯ ಮೊದಲಾದವರು ಕೆಲವು ಸಾಮಾನ್ಯ ಸೇವೆಗಳನ್ನು ಸಲ್ಲಿಸಿದ್ದರೂ ವಿಶೇಷ ಸೇವೆಯನ್ನು ಸಲ್ಲಿಸಲಾಗಲಿಲ್ಲ. ರಾಜರ ಸೇವೆ ಕಡಿಮೆಯಾದಾಗಲೂ ಅವರ ಅಧಿಕಾರಿಗಳು, ಸೇವಕರು, ನಗರದ ಹಿರಿಯರು, ವ್ಯಾಪಾರದ ಶ್ರೇಷ್ಠಿಗಳು, ದೇವಸ್ಥಾನದ, ಸಿಬ್ಬಂದಿಗಳು, ಆಚಾರ್ಯ ಪುರುಷರು ಬಹಳ ಔದಾರ್ಯದಿಂದ ದೇವಸ್ಥಾನದ ಪೂಜಾಕಾರ್ಯಗಳು ಯಥಾವತ್ತಾಗಿ ನಡೆಯಲು ಯಥಾಶಕ್ತಿ ಸಹಕರಿಸಿದ್ದಾರೆ.

೧೭ನೆಯ ಶತಮಾನದ ವೇಳೆಗೆ ವಿಜಯನಗರವು ಪೂರ್ಣವಾಗಿ ದುರ್ಬಲವಾಗಲು, ಅವರ ಉತ್ತರಾಧಿಕಾರಿಗಳಿಂದ ಮೈಸೂರು ಒಡೆಯರುಗಳಾದ ಚಿಕ್ಕದೇವರಾಜ, ಕಂಠೀರವ ನರಸರಾಜ, ದೊಡ್ಡ ಚಾಮರಾಜ, ಮುಮ್ಮಡಿ ಕೃಷ್ಣರಾಜ ಮೊದಲಾದವರು ವೆಂಕಟೇಶನಿಗೆ ಅನೇಕಸೇವೆಗಳನ್ನಲ್ಲದೆ ಯಾತ್ರಿಕರಿಗೆ ಅನುಕೂಲವಾಗುವಂತೆ ಸತ್ರಾದಿಗಳನ್ನು ಕಟ್ಟಿಸಿದ್ದಾರೆ.

ವೇದಾಂತದೇಶಿಕರು ಶ್ರೀನಿವಾಸನ ಘಂಟಾವತಾರವೆಂದು ಪ್ರಸಿದ್ಧರಾಗಿ ಅವರ ವಿಷಯವಾಗಿ 'ದಯಾಶತಕ'ವೆಂಬ ಸ್ತೋತ್ರವನ್ನು ರಚಿಸಿದ್ದಾರೆ. ಶಾಸನಗಳಲ್ಲಿ ಅವರ ವಿಷಯವು ಏನೂ ತಿಳಿಯುವುದಿಲ್ಲ.

ಕೃಷ್ಣದೇವರಾಯನು ವ್ಯಾಸತೀರ್ಥರಿಗೆ ತಿರುಪತಿ ಮತ್ತು ತಿರುಮಲೆಯಲ್ಲಿ ಮನೆ ಮತ್ತು ನಿವೇಶನಗಳನ್ನು ಕೊಟ್ಟಿರುವ ವಿಷಯವು ಕ್ರಿ. ಶ. ೧೫೩೪ರ ಶಾಸನದಲ್ಲಿ ಉಕ್ತವಾಗಿದೆ. ಅದೇ ವರ್ಷ ನವೆಂಬರ್ ತಿಂಗಳಲ್ಲಿ ವ್ಯಾಸತೀರ್ಥರು ವೆಂಕಟೇಶನ ಕೆಲವು ಸೇವೆಗಳಿಗಾಗಿ ದೇವಸ್ಥಾನದ ಭಂಡಾರಕ್ಕೆ ದ್ರವ್ಯವನ್ನು ಸಮರ್ಪಿಸಿರುವುದು ಉಕ್ತವಾಗಿದೆ. ಇದು ವಿನಾ ಇವರ ವಿಷಯವಾಗಿ ಮತ್ತೇನನ್ನೂ ಶಾಸನಗಳಲ್ಲಿ ಕಾಣಲಾಗುವುದಿಲ್ಲ.

ಉತ್ಸವಗಳು ಹೆಚ್ಚಾದಷ್ಟೂ ಮಲೆಯಪ್ಪನಿಗೆ ಪ್ರಾಶಸ್ತ್ಯ ಹೆಚ್ಚಾಯಿತು. ಆದರೆ ಮೂಲ ವೆಂಕಟೇಶನಿಗೆ ಪ್ರಾಶಸ್ತ್ಯವೇನೂ ಕಡಿಮೆಯಾಗಲಿಲ್ಲ ಬ್ರಹ್ಮೋತ್ಸವ, ಕೋಟೆ ತ್ತಿರುನಾಳ್ ಮೊದಲಾದ ಕಾಲದಲ್ಲಿ ಮಲೆಯಪ್ಪನು ತಿಂಗಳುಗಟ್ಟಲೆ ಗರ್ಭಗೃಹಕ್ಕೆ ಬಿಜಯ ಮಾಡಿಸುವುದೇ ಇಲ್ಲ. ವೆಂಕಟೇಶನ ಪೂಜೆಗೆ ವ್ಯತ್ಯಾಸವೂ ಆಗುವುದಿಲ್ಲ ಆದರೆ ಉತ್ಸವಕಾಲದಲ್ಲಿ ವೆಂಕಟೇಶನ ನಿತ್ಯ ಪೂಜಾಕಾರ್ಯಗಳು ನಿಯತಕಾಲದಲ್ಲಿ ನಡೆಯುವುದು ಕಷ್ಟವಾಗಿದೆ. ಮಲೆಯಪ್ಪನಿಗೆ ಪ್ರಾಶಸ್ತ್ಯ ಬಂದಿರುವುದೂ ಅವನ ಉತ್ಸವಗಳೆಲ್ಲಾ ವೆಂಕಟೇಶನಿಗೆ ಸಮರ್ಪಿತವಾದುದೆಂಬ ಭಾವನೆಯಿಂದಲೇ. ಈಗಲೂ ತಿರುಮಲೆಗೆ ಹೋದವರಾರೂ ಮಲೆಯಪ್ಪನ ಸೇವೆಯನ್ನು ಮಾತ್ರ ಮಾಡಿ ಹಿಂತಿರುಗುವುದಿಲ್ಲ ಎಂತಹ ಕಷ್ಟ ಬಂದರೂ ಎಲ್ಲವನ್ನೂ ಸಹಿಸಿಕೊಂಡು ಧರ್ಮ ಸೇವೆಯ ಮೂಲಕವೋ, ಅರ್ಜಿತ ಸೇವೆಯ ಮೂಲಕವೋ ವೆಂಕಟೇಶನನ್ನು ದರ್ಶನ ಮಾಡಿಯೇ ಬರುತ್ತಾರೆ. ವೇಂಗಡದ ಬೆಟ್ಟ ಮತ್ತು ವೆಂಕಟೇಶ್ವರನ ಹೆಸರೇ ವಿಶೇಷ ಮೋಹಕವಾಗಿ ಬಹು ಆಕರ್ಷಕವಾಗಿರುತ್ತದೆ. ಆತನ ಹೆಸರಿನಲ್ಲಿ ಯಾವ ಕೊನೆಯಲ್ಲಿ ದೇವಾಲಯವನ್ನೂ ಕಟ್ಟಿಸಿದರೂ ಅದು ವಿಶೇಷ ಪ್ರಾಬಲ್ಯಕ್ಕೆ ಬಂದು ಅತ್ಯಲ್ಪ ಕಾಲದಲ್ಲಿ ಎಣಿಸಲಾರದಷ್ಟು ಕಾಣಿಕೆಗಳನ್ನು ಸಂಪಾದಿಸಬಲ್ಲದು. ಈಚೆಗೆ ಅಮೆರಿಕದ 'ಟೆಕ್ಸಾಸ್' ಎಂಬಲ್ಲಿ ಸ್ಥಾಪಿತವಾದ ವೆಂಕಟೇಶ್ವರನ ಹುಂಡಿಯಲ್ಲಿ ಕಳೆದ ಒಂದು ವರ್ಷದಲ್ಲಿ ೩೦ ಲಕ್ಷ ಪೌಂಡುಗಳು ಶೇಖರವಾಗಿದೆ ಎಂಬುದನ್ನು ಕೇಳಿದಾಗ ಜನಗಳಲ್ಲಿ ವೆಂಕಟೇಶ್ವರನ ಹೆಸರಿಗೆ ಇರುವ ಮೋಹಕ್ಕೆ ಹೆಚ್ಚಿನ ಸಾಕ್ಷಿ ಬೇಕೆ? ★

## ಜುಲೈ ತಿಂಗಳ ಮುಖ್ಯ ದಿನಗಳು

| | | |
|---|---|---|
| ಮಂಗಳವಾರ | 6 | ವ್ಯಾಸಪೂರ್ಣಿಮೆ |
| ಸೋಮವಾರ | 12 | ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವ ಸಮಾಪ್ತಿ |
| ಶುಕ್ರವಾರ | 16 | ಕರ್ಕಾಟಕ ಸಂಕ್ರಮಣ. ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಆನಿವರ ಆಸ್ಥಾನ |
| ಭಾನುವಾರ | 25 | ಋಗ್ವೇದ ಉಪಾಕರ್ಮ |
| ಮಂಗಳವಾರ | 27 | ಮಂಗಳಗೌರೀ ವ್ರತ |
| ಶುಕ್ರವಾರ | 30 | ವರಲಕ್ಷ್ಮೀವ್ರತ. |

## ಪುಸ್ತಕ ವಿಮರ್ಶೆ

### ಶ್ರೀಮದ್ಭಾಗವತ ಪಂಚರತ್ನಗಳು

ಲೇ|| ಶ್ರೀ ಪಾದಭಟ್ಟ ವೈದ್ಯ;

ಪ್ರಕಾಶಕರು:

ಶ್ರೀಪಾದಭಟ್ಟ ಶಂಕರಭಟ್ಟ ವೈದ್ಯ;

ಪುಟ: ೨೮; ಬೆಲೆ: ೧-೫೦.

---

ಭಾರತೀಯ ಪೌರಾಣಿಕ ವಾಙ್ಮಯದಲ್ಲಿ ರಾಮಾಯಣ, ಭಾಗವತ, ಮಹಾಭಾರತ ಇವುಗಳ ಸ್ಥಾನ ಅದ್ವಿತೀಯ, ಭಕ್ತಿ ಭಾವದ ಕಾವ್ಯಗಳು, ಕತೆಗಳು ಮುದ್ರಿತವಾದ ಪುಸ್ತಕಗಳು ಇಂದು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಮಾರಾಟವಾಗುತ್ತಿವೆ. ಪುರಾಣಗಳ ಮಹತ್ವ ನಮ್ಮ ದೇಶದಲ್ಲಿ ವಿಶಿಷ್ಟವಾದದ್ದು, ಪುರಾಣಗಳಲ್ಲಿ ಆಧ್ಯಾತ್ಮಿಕ ವಿಚಾರಗಳು ಸುಂದರವಾಗಿ ಅಡಕವಾಗಿರುತ್ತವೆ. ಅವುಗಳ ಪ್ರತಿಯೊಂದು ಕತೆಗಳಲ್ಲೂ ಆಧ್ಯಾತ್ಮಿಕ ತತ್ತ್ವ ಮತ್ತು ಭಕ್ತಿ ಮನೋಭಾವ ತುಂಬಿರುತ್ತದೆ.

ಈ ಪುಸ್ತಕದಲ್ಲಿ ಶ್ರೀಮದ್ಭಾಗವತದಿಂದಲೇ ಆರಿಸಲಾದ ಐದು ಕತೆಗಳು "ಪಂಚರತ್ನಗಳು" ಎಂಬ ಶೀರ್ಷಿಕೆಯಡಿಯಲ್ಲಿ ಅಂದವಾಗಿ ಪ್ರಕಟವಾಗಿವೆ. ಇದರಲ್ಲಿ ಪ್ರಥಮವಾಗಿ ಪ್ರಥಮ ಸ್ಕಂದದಿಂದ ದ್ವಾದಶ ಸ್ಕಂದದವರೆಗೆ ಸಂಪೂರ್ಣ ಸಾರಾಂಶವನ್ನು ನೀಡಲಾಗಿದೆ.

ದೇವಹೂತಿಗೆ ತತ್ತ್ವಜ್ಞಾನ ಹಾಗೂ ಮೋಕ್ಷಪ್ರಾಪ್ತಿಯಾದ ವಿವರ ಭಾಗವತ 3 ನೇ ಸ್ಕಂಧದ 33 ನೇ ಅಧ್ಯಾಯದಲ್ಲಿದೆ. ಶ್ರೀಮನ್ನಾರಾಯಣನ ಸ್ವರೂಪಿಯಾದ ಕಪಿಲ ದೇವರ ದರ್ಶನಮಾತ್ರದಿಂದ ಚಂಡಾಲ ಕೂಡ ಶ್ರೇಷ್ಠನಾಗುತ್ತಾನೆ. 'ವಿಶ್ವಾಸೋ ಫಲದಾಯಕಃ' ಎಂಬ ವಚನದಂತೆ ದೇವರಲ್ಲಿ ನಂಬುಗೆಯಿಟ್ಟ ಮಾನವ ಎಂದಿಗೂ ಕಷ್ಟಕ್ಕೆ ಸಿಲುಕಲಾರ. ಎಂದೇ ಆ ನಂಬುಗೆಯ ತೃಣವನ್ನು ಹಿಡಿದು ಸಂಸಾರರೂಪೀ ಸಾಗರ ದಾಟಿದ ದೇವಹೂತಿ ಪಾರಾದಳು. ಆಕೆಗೆ ಸಿದ್ಧಿ ದೊರೆತ ಸ್ಥಾನ ಸಿದ್ಧಪದ ಎಂಬ ನಾಮಧೇಯವನ್ನು ಪಡೆಯಿತು. ಇದೇ ಕಪಿಲ ಮಹಾಮುನಿಗಳ ಆಖ್ಯಾನ ಎಂಬುದು.

2 ನೆಯ ರತ್ನ ಪ್ರಚೇತರಿಗೆ ನಾರದ ಕೊಟ್ಟ ಉಪದೇಶ ಹಾಗೂ ಅದರಿಂದ ಅವರಿಗೆ ಸಿಕ್ಕಿದ ಪರಮಪದದ ಲಾಭದ ವಿವರ. ಪ್ರಚೇತಸ ಭಾರ್ಯೆಯೇ ಮಾರಿಷಾ ಎಂಬುವಳು, ಅವರು ಸಿದ್ಧಿ ಪ್ರಾಪ್ತಿಗಾಗಿ ಹೆಂಡತಿಯನ್ನು ತನ್ನ ಮಕ್ಕಳ ಆಶ್ರಯದಲ್ಲಿ ಬಿಟ್ಟು ಪಶ್ಚಿಮ ದಿಕ್ಕಿನ ಸಮುದ್ರ ದಂಡೆಯಲ್ಲಿ ತಪಸ್ಸಿಗೆ ಕುಳಿತರು. ಅಲ್ಲಿ ಅವರಿಗೆ ನಾರದರ ದರ್ಶನವಾಯಿತು. ನಾರದರು ಅವರಿಗೆ ಶ್ರೀಹರಿಯ ಸಾಕ್ಷಾತ್ಕಾರದ ಮಾರ್ಗವನ್ನು ತಿಳಿಸಿದರು, ಪ್ರಚೇತಸರು ನಾರದರ ಮಾತಿನಂತೆ ಶ್ರೀಮನ್ನಾರಾಯಣನ ಧ್ಯಾನಮಾಡುತ್ತಾ ಸಿದ್ಧಿಯನ್ನು ಪಡೆದರು.

ಇಲ್ಲಿ ಕೊಟ್ಟಿರುವ 3ನೇ ರತ್ನವು ಹಿರಣ್ಯಾಕ್ಷನ ವಧೆ. ಭಗವಂತನು ಹಿರಣ್ಯಾಕ್ಷನನ್ನು ಸಂಹಾರ ಮಾಡಲು ಗದಾ ಹಸ್ತನಾಗಿ ಹೊರಟನು, ಶತ್ರುವಿನ ತುಟಿಯ ಮೇಲೆ ಗದೆಯ ಪ್ರಹಾರವನ್ನು ಹಾಕಿದನು. ಆದರೆ ಹಿರಣ್ಯಾಕ್ಷನ ಗದೆಗೆ ಡಿಕ್ಕಿ ಹೊಡೆದು ಆ ಗದೆಯು ಭಗವಂತನ ಕೈಯಿಂದ ಕೆಳಗೆ ಬಿದ್ದಿತು, ಗದೆಯು ಕೆಳಗೆ ಬಿದ್ದ ಕಾರಣ ಸರ್ವಜನರಲ್ಲಿ ಹಾಹಾಕಾರವುಂಟಾಗಿ ತುಸು ಸಮಯದ ನಂತರ ಕಡಿಮೆಯಾದ ಮೇಲೆ ಪ್ರಭುವು ಹಿರಣ್ಯಾಕ್ಷನ ಧರ್ಮ ಬುದ್ಧಿಯ ಪ್ರಶಂಸೆ ಮಾಡಿದನು ಮತ್ತು ತನ್ನ ಸುದರ್ಶನ ಚಕ್ರದ ಸ್ಮರಣೆ ಮಾಡಿದನು. ಚಕ್ರವು ತಕ್ಷಣವೇ ಅಲ್ಲಿಗೆ ಬಂದು ಭಗವಂತನ ಕೈಯಲ್ಲಿ ತಿರುಗಹತ್ತಿತು, ಆ ಕ್ಷಣದಲ್ಲಿ ಆ ತೀಕ್ಷ್ಣವಾದ ದವಡೆ ಹಲ್ಲುಗಳುಳ್ಳ ದೈತ್ಯನು ತನ್ನ ನೇತ್ರಗಳಿಂದ ಆತನೆಡೆಗೆ ದಿಟ್ಟಿಸಿ ನೋಡ ತೊಡಗಿದನು. ಭಗವಂತನು ಶತ್ರು ನೋಡ ನೋಡುತ್ತಿರುವಾಗಲೇ ಲೀಲೆಯಿಂದಲೇ ತನ್ನ ಎಡಗಾಲಿನಿಂದ ಆತನ ಆ ವಾಯುವಿನ ಸಮಾನವಾದ ವೇಗದಿಂದ ಬರತಕ್ಕ ಗದೆಯನ್ನು ಪೃಥ್ವಿಯ ಮೇಲೆ ಬೀಳುವಂತೆ ಮಾಡಿದನು, ಈಗ ದೈತ್ಯನು ಭಗವಂತನನ್ನು ಎದುರಿಸಿದ, ಭಗವಂತನು ಅವನನ್ನು ಸಂಹಾರಮಾಡಿದ.

4 ಮತ್ತು 5 ನೇ ರತ್ನಗಳು ಪೃಥುವಿಗೆ ಸಂಬಂಧಪಟ್ಟದ್ದು ಮತ್ತು ಚಿತ್ರಕೇತುವಿಗೆ ಪಾರ್ವತಿ ಶಾಪ ಕೊಟ್ಟ ವೃತ್ತಾಂತ.

ಸಂಗ್ರಹಯೋಗ್ಯ ಗ್ರಂಥ.

**ಸೀತಾಪ್ರಿಯ**

---

## ಕಿಗರದ ಹಿಂದೂ ಸಮಾಜೋತ್ಸವ

ಕೋಲಾರದ ಬೀದಿಗಳೆಲ್ಲ ಸ್ವಚ್ಛವಾಗಿ ರಂಗು ನ ರಂಗೋಲಿಯಿಂದ ಕೂಡಿ, ವಿವಿಧ ವರ್ಣ ಸ್ವಾಗತ ಕಮಾನುಗಳನ್ನು ಹೊಂದಿ, ಹಸಿರು ರಣಗಳಿಂದ ತುಂಬಿ, ಕೇಸರಿ ಬಣ್ಣದ ಕಾರದ ಧ್ವಜಗಳ ಹಾರಾಟದಿಂದ, ಹಿಂದೂ ನುಗಳ ಸಮಾಜೋತ್ಸವದ ಮೆರವಣಿಗೆಯನ್ನು ಗತಿಸುತ್ತ ಉತ್ಸಾಹ ಸಡಗರದಿಂದ ತುಂಬಿ ನ ಮೆರವಣಿಗೆಯ ಮೇಲೆ ಪುಷ್ಪ ವೃಷ್ಟಿ ಕರೆ ು.



ಹಿಂದೂ ಸಮಾಜದಲ್ಲಿ ಭಾಗವಹಿಸಿದ ನಾಲ್ವರು ಧರ್ಮ ಪೀಠಾಧಿಪತಿಗಳು.




ಏಪ್ರಿಲ್ ಇಪ್ಪತ್ತೈದರ ಭಾನುವಾರ ಸ್ವಾಹ್ನ 2-30ಕ್ಕೆ ಜೂನಿಯರ್ ಕಾಲೇಜು ದಾನದಿಂದ ಹೊರಟ ಹಿಂದೂ ಸಮಾಜದ ರವಣಿಗೆಯ ಮೂಲ ನದಿಗೆ ಕೋಲಾರದ ವಿವಿಧ ಗಗಳಿಂದ ಜನ ಸೇರುತ್ತ ನಡೆದಂತೆ ಜನಸಾಗ ೯ ಚಲಿಸುತ್ತಿರುವಂತೆ ಭಾಸವಾಗುತ್ತಿತ್ತು. ಎವುದೇ ಒಂದು ಸ್ಥಳವನ್ನು ಪೂರ್ಣವಾಗಿ ಯ್ದು ಹೋಗಲು ಮೂವತ್ತೈದು ನಿಮಿಷ ದುಕೊಂಡ ಮೆರವಣಿಗೆಯಲ್ಲಿ 'ನಾವೆಲ್ಲ ದೂ, ನಾವೆಲ್ಲ ಬಂಧು,' 'ಭಾರತಮಾ ಕೀ ಜೈ,' 'ಆಚಾರ್ಯ ದೇವೋಭವ' ಎದಲಾದ ಘೋಷಗಳು ಆಗಸದಲ್ಲಿ ಗುಡುಗುತ್ತಿ ತೆ ಮುಂದೆ ಸಂಜೆ ಬಂದ ಮಳೆಯ ಮುನ್ಸೂ ಿಯಂತೆ ಎನ್ನಿಸಿತು.

ಮೆರವಣಿಗೆಯ ನಡುನಡುವೆ ಗೀತೋಪದೇಶ, ತಮಾತೆ, ಕೃಷ್ಣದೇವರಾಯ, ಶಿವಾಜಿ, ವೇಕಾನಂದ, ಮೊದಲಾದ ಟ್ಯಾಬ್ಲಾಯ್ ೂ 'ಓಂ' ಕಾರದ ಟ್ಯಾಬ್ಲೋಗಳೂ, ಗಂಗಮ್ಮ ನುಮಂತ ರಾಮದೇವರುಗಳ ಪಲ್ಲಕ್ಕಿಗಳೂ ರಿ ರಸ್ತೆಯ ಇಕ್ಕೆಲದ ಜನವನ್ನೂ ಆಕರ್ಷಿಸುತ್ತ ಡಿದ್ದವು.

ಮೆರವಣಿಗೆಯನ್ನು ಸ್ವಾಗತಿಸಲು ಅಲ್ಲಲ್ಲಿ ಆರತಿಯನ್ನು ಹಿಡಿದ ಹೆಂಗೆಳೆಯರು, ಪುಷ್ಪ ವೃಷ್ಟಿಗಾಗಿ ನಿಂತ ಹಿರಿಯರುಗಳೊಡನೆ ಮನೆಮನೆಯ ಮೇಲೂ ಓಂಕಾರದ ಬಾವುಟಗಳು ಹಾರಾಡುತ್ತಿದ್ದುದು ಕಂಡು ಬಂದಿತು.

ಮೆರವಣಿಗೆಯ ಆದ್ಯಂತಗಳಲ್ಲಿ ಓಂಕಾರದ ಬಾವುಟಗಳನ್ನು ಹೊತ್ತ ದ್ವಿಚಕ್ರ ವಾಹನಗಳಲ್ಲಿ ಕಾರ್ಯಕರ್ತರು ಪಾಲುಗೊಂಡು ರಸ್ತೆಯ ಇಕ್ಕೆಲಗಳ ಜನ ಸಂದಣಿಯನ್ನು ನಿಯಂತ್ರಿಸುತ್ತ ಮಾರ್ಗದರ್ಶಿಗಳಾಗಿ ಕೆಲಸ ಮಾಡುತ್ತ ಇಡೀ ಮೆರವಣಿಗೆ ಶಾಂತಿಯುತವಾಗಿ ನಡೆಯುವಂತೆ ನೋಡಿಕೊಳ್ಳುವಲ್ಲಿ ಪೂರಕರಾದರು. ಪಕ್ಷ ಪಂಥ ಭೇದವಿಲ್ಲದೆ ಊರಿನ ಗಣ್ಯರೆಲ್ಲರೂ ಮೆರವಣಿಗೆಯಲ್ಲಿ ಹಿಂದೂಬಂಧುಗಳೊಡನೆ ಹೆಜ್ಜೆ ಹಾಕಿದ್ದು ಮತ್ತೊಂದು ವಿಶೇಷವಾಗಿದ್ದಿತು.

ಚಿತ್ರವರದಿ : ಜಿ. ಸೋಮಶೇಖರ್,



ಮೆರವಣಿಗೆಯನಂತರ ಜೂನಿಯರ್ ಕಾಲೇಜಿನಲ್ಲಿ ನಡೆದ ಬಹಿರಂಗ ಸಭೆಯ ಒಂದು ಪಾರ್ಶ್ವ ನೋಟ



ಬಹಿರಂಗಸಭೆಯನ್ನು ಸ್ವಾಗತಿಸುತ್ತ
ಶ್ರೀ ಬಿಸಪ್ಪಗೌಡ

ಭಾರತ ಮಾತೆಯ ದೇಹದ ಚರಣ ಸದೃಶವಾದ ಕನ್ಯಾಕುಮಾರಿಯಲ್ಲೂ ಶಿರ ಸದೃಶ ಕಾಶ್ಮೀರದಲ್ಲೂ ವಿಧರ್ಮೀಯರ ಕಿರುಕುಳ ಹೆಚ್ಚುತ್ತಿದೆಯಾದರೂ, ಆದಕ್ಕಿಂತಲೂ ಹೆಚ್ಚಿಗೆ ಹೃದಯಕ್ಕೆ ಶಲ್ಯ ಸದೃಶವಾದ ಹರಿಜನ ಸಮಸ್ಯೆಯನ್ನು

ಆದ್ದರಿಂದಾಗಿ ನಾವೆಲ್ಲರೂ ಏಕಮುಖವಾಗಿ ಸಾಗೋಣ ಎಂದು ಕೋಲಾರದ ಹಿಂದೂ ಸಮಾಜೋತ್ಸವದ ಅಂಗವಾಗಿ ಏರ್ಪಡಿಸಿದ್ದ ಸಭೆಯ ಅಧ್ಯಕ್ಷ ಪೀಠದಿಂದ ಬೇಲಿ ಮಠದ ಶ್ರೀ ಮ. ನಿ. ಪ್ರ. ಚರಮೂರ್ತಿ ಶಿವರುದ್ರ ಮ.ಹಾಸ್ವಾಮಿಗಳು ಕರೆ ನೀಡಿದರು.

ಮಹಾಸ್ವಾಮಿಗಳು ಮಾತನಾಡುತ್ತ ತಮ್ಮ ಅಪೇಕ್ಷೆಯನ್ನು ಜನತೆ ಆಸಕ್ತಿಯಿಂದ ಕೈಗೂಡಿಸಿದ ಉದಾಹರಣೆಗಳನ್ನು ನೀಡಿ ತಮಗೆ ಹಿಂದೂ ಧರ್ಮದ ವೈಶಿಷ್ಟ್ಯ ವೈಶಾಲ್ಯಗಳನ್ನು ಜಗತ್ತಿಗೆ ತೋರುವ ಅಪೇಕ್ಷೆ ಇದೆಯೆಂದೂ ಹಿಂದೂ ಬಾಂಧವರು ಈ ದಿಕ್ಕಿನಲ್ಲಿ ಕಾರ್ಯ ಪ್ರವೃತ್ತರಾಗಿ ಹಿಂದೂ ಸಮಾಜದ ಪುರೋಭಿವೃದ್ಧಿಗೆ ಕಾರಣರಾಗಬೇಕೆಂದೂ ಕಳಕಳಿಯಿಂದ ವಿನಂತಿಸಿಕೊಂಡರು.

ಟಿ. ಎನ್. ಪ್ರಭಾಕರ ಅವರ ವೇದ ಘೋಷದ ನಂತರ ತಂಬಿ ಹಳ್ಳಿಯ ಶ್ರೀ ಶ್ರೀ ಸತ್ಯಮಾಧವ ತೀರ್ಥ ಶ್ರೀಪಾದರಿಂದ ಉದ್ಘಾಟಿತವಾದ ಸಭೆಯಲ್ಲಿ ಆದಿ ಚುಂಚನ ಗಿರಿ ಮಹಾಸಂಸ್ಥಾನದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಜೀ ಅವರು ಮಾತನಾಡಿ ನಮ್ಮ ಭಿನ್ನತೆಯ ಧೋರಣೆ



ಸಭೆಯನ್ನುದ್ದೇಶಿಸಿ ಮಾತನಾಡುತ್ತ ಹಿಂದೂಸೇವಾ
ಪ್ರತಿಷ್ಠಾನದ ಶ್ರೀಅಜಿತಕುಮಾರ್

ಹಿಂದೂ ಸೇವಾ ಪ್ರತಿಷ್ಠಾನದ ಸಂಚಾಲಕ ಶ್ರೀ ಅಜಿತ ಕುಮಾರ್ ಅವರು ಹಿಂದೂ ಧರ್ಮದ ಹಿರಿಮೆಯನ್ನು ಎತ್ತಿ ತೋರುತ್ತ ಇಲ್ಲಿನ ವೈಶಾಲ್ಯವನ್ನು ವಿವರಿಸಿ, ಧರ್ಮಕ್ಕೆ ಸಂಕಷ್ಟ ಬಂದಿರುವ

## ಧರ್ಮರಕ್ಷಣೆಗಾಗಿ ಭೇದಭಾವ ಮರೆತು ಕೃಷಿಮಾಡುವ - ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳ ಕರೆ

ಮೊದಲು ನಿವಾರಿಸಬೇಕಿದೆಯಾದ್ದರಿಂದ ಈ ಸಂಧಿಕಾಲದಲ್ಲಿ ಹಿಂದೂ ಧರ್ಮದ ಎಲ್ಲ ಪಂಗಡಗಳೂ ತಮ್ಮ ಭೇದ ಭಾವವನ್ನು ಮರೆತು ಧರ್ಮ ಸಂರಕ್ಷಣೆಯಲ್ಲಿ ಕೃಷಿ ಮಾಡಬೇಕಾಗಿದೆ.

ಗಳಿಂದಾಗಿ ನಮ್ಮ ಧರ್ಮ ಕುಂದುವುದೆಂದೂ ಈ ತೊಡಕಿನ ನಿವಾರಣೆಗಾಗಿ ಹಿಂದೂಗಳಲ್ಲಿ ಸೌಹಾರ್ದ ಭಾವವುಂಟಾಗಿ ಸಂಘಟಿತರಾಗಬೇಕಿದೆ ಎಂದೂ ನುಡಿದರು.



ಈ ಹೊತ್ತಿನಲ್ಲಿ ಹಿಂದೂಗಳು ಸದಾಸಂಘಟಿತರಾಗಿ, ಜಾಗೃತರಾಗಿ ಇರಬೇಕಾದ ಅಗತ್ಯವನ್ನು ಕುರಿತು ಅವಧಾರಿಸಿ ಮಾತನಾಡಿದರು.

ಮೌನವನ್ನು ಆಚರಿಸುತ್ತಿರುವ ನೆಲಗುಂಡ ದೇವರ ಮಠದ ಶ್ರೀ ಶ್ರೀ ಕರಿಬಸವಸ್ವಾಮಿಗಳು ತಮ್ಮ ಮೌನದಿಂದಲೇ ಸಭೆಯಲ್ಲಿನ ಸಂಘಟಿತ ಕ್ರಮದ ಬಗ್ಗೆ ಸಂತೋಷವನ್ನೂ, ಇತರ ಭಾಷಣಕಾರರು ಮಾಡಿದ ಭಾಷಣಗಳಲ್ಲಿನ ಆಗಬೇಕಾದ ಕಾರ್ಯಗಳ ಬಗ್ಗೆಯೂ ತಮ್ಮ ಒಪ್ಪಿಗೆಯನ್ನೂ ಸೂಚಿಸಿದರು.

ಹಿಂದೂ ಸಮಾಜೋತ್ಸವ ಸಮಿತಿಯ ಅಧ್ಯಕ್ಷ ಶ್ರೀ ಬಿಸಪ್ಪ ಗೌಡರು ಸ್ವಾಗತಿಸಿದ ಸಭೆಯನ್ನು ಶ್ರೀಪಾರ್ಥಸಾರಥಿ ಅವರು ವಂದಿಸಿದರು.

ಸಭೆಯಲ್ಲಿನ ಶ್ರೀಪಾದಂಗಳವರಿಗೆ ಮಾಲಾರ್ಪಣ
ಮಾಡುತ್ತ ಕುಮಾರಿ ಸರಸ್ವತಿ.

( 3ನೇ ಪುಟದಿಂದ )

## ವಾರ್ಷಿಕೋತ್ಸವ

ತಿ. ತಿ. ದೇವಸ್ಥಾನಗಳ ಮೂಕ ಬಧಿರಾಂಧ ಪಾಠಶಾಲೆಯ ಎಂಟನೆಯ ವಾರ್ಷಿಕೋತ್ಸವ ವನ್ನು ಈಚೆಗೆ ಸಡಗರದಿಂದ ಆಚರಿಸಲಾಯಿತು.

1976 ರಲ್ಲಿ 16 ಮಂದಿ ಬಾಲಕರೊಂದಿಗೆ ಆರಂಭವಾದ ಈ ಶಾಲೆ ದಿನೇದಿನೇ ಅಭಿವೃದ್ಧಿ ಹೊಂದುತ್ತ ಇಡೀ ದಕ್ಷಿಣ ಭಾರತದಲ್ಲೇ ಅತ್ಯು ತ್ತಮ ಮೂಗ ಬಧಿರಾಂಧ ಪಾಠಶಾಲೆಯೆಂದ ಹೆಸರುಗಳಿಸಿ ಈಗ ತತ್ಸಂಬಂಧಿ ಉಪಾಧ್ಯಾಯ ತರಬೇತಿ ಶಿಬಿರಗಳನ್ನೂ ನಡೆಸುತ್ತಿದೆ. ದಕ್ಷಿಣ ದಲ್ಲಿ ಮೊದಲ ಬಾರಿಗೆ ವಿದ್ಯಾರ್ಥಿಗಳ ಪ್ರಯೋ ಜನಕ್ಕಾಗಿ ಸೌಂಡ್ ಪ್ರೂಫ್ ಕೊಠಡಿಗಳನ್ನೂ ಹೊಂದಿರುವ ಈ ಶಾಲೆಯಲ್ಲಿ ಸಧ್ಯಕ್ಕೆ 130 ಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳು ಅಧ್ಯಯನ ನಡೆ ಸುತ್ತಿದ್ದು, ಇಲ್ಲಿಂದ ಹೊರಗೆ ಪರೀಕ್ಷೆಗೆ ಕುಳಿತಾಗ ಸಾಫಲ್ಯ ಪಡೆಯುವುದು ಶತಾಂಶಕ್ಕೇರಿದೆ.

ವಾರ್ಷಿಕೋತ್ಸವಗಳಲ್ಲಿ ಭಾಗವಹಿಸಿ ಮಾತ ನಾಡಿದ ಶ್ರೀ ಪಿ. ಎಸ್. ರಾಜಗೋಪಾಲ ರಾಜು ಅವರು ತಾವು ಕಾರ್ಯನಿರ್ವಹಣಾಧಿಕಾರಿಗ ಳಾಗಿದ್ದಾಗ ಆರಂಭವಾದ ಈ ಶಾಲೆ ಅಂದು ಎದುರಿಸಿದ ಕಷ್ಟಗಳನ್ನು ನೆನಪಿಸಿಕೊಂಡು, ಇಂದು ಈ ಶಾಲೆಯ ಪುರೋಭಿವೃದ್ಧಿಯ ಬಗ್ಗೆ ಹರ್ಷ ವನ್ನು ವ್ಯಕ್ತ ಪಡಿಸುತ್ತ, ತಿ. ತಿ. ದೇವಸ್ಥಾನ ಗಳು ಸಾಮಾನ್ಯ ಶಿಕ್ಷಣದ ವೆಚ್ಚವನ್ನು ಸ್ಥಗಿತ ಗೊಳಿಸಿದ್ದಾದರೂ, ಸಹ ಈ ಶಾಲೆಯ ಬಗ್ಗೆ ಮತ್ತೂ ಹೆಚ್ಚು ವೆಚ್ಚ ಮಾಡಲು ಸಿದ್ಧವಿರುವ ಅಂಶವನ್ನು ವಿವರಿಸಿದರು.

ಸಭೆಯಲ್ಲಿ ಮಾತನಾಡುತ್ತ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಇಲ್ಲಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯ ನಂತರದ ಉಪಾಧಿ ಕಲ್ಪನೆಯ ತ್ತಲೂ ತಿ. ತಿ ದೇವಸ್ಥಾನಗಳು ಚಿಂತಿಸುವು ದೊಂದೂ ತಿ. ತಿ. ದೇ. ಸಂಸ್ಥೆಗಳಲ್ಲಿ ಉದ್ಯೋ ಗಾವಕಾಶಗಳ ಕಲ್ಪನೆ ಹಾಗೂ ಸರಕಾರದ ವತಿಯಿಂದ ಹೆಚ್ಚಿನ ರಿಯಾಯಿತಿಗಳನ್ನು ಪಡೆಯು ವಲ್ಲಿ ಪ್ರಯತ್ನಗಳು ನಡೆಯುತ್ತಿವೆಯೆಂದು ತಿಳಿ ಸಿದರು.

ಶಾಲೆಯ ವಾರ್ಷಿಕ ಸಂಸ್ಮರಣ ಸಂಚಿಕೆ 'ಬಧಿ ರವಾಣಿ'ಯನ್ನು ಬಿಡುಗಡೆ ಮಾಡಿದ ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಸುಬ್ಬರಾಯುಲು ಅವರು ಮಾತನಾಡುತ್ತ 'ತಿ. ತಿ. ದೇ. ಈ ಶಾಲೆಯ ಸರ್ವತೋಮುಖ ಅಭಿವೃಧ್ಧಿಗೆ ಶ್ರಮಿಸುವುದೆಂದು ಮೊದಲು ಮಾತನಾಡಿದ ಹಿರಿಯರು ಮನದಟ್ಟು ಮಾಡಿ ಕೊಟ್ಟಿದ್ದಾರೆ ಆದರೆ ಶ್ರೀವೆಂಕಟೇಶ್ವರ ಸ್ವಾಮಿಯಬಗ್ಗೆ ಭಕ್ತಿ ಹೊಂದ ಬೇಕಾದದ್ದು ಮೊದಲನೆಯ ಅಗತ್ಯ' ವೆಂದೂ ತಿಳಿಸಿದರು.

ಸಭೆಯನಂತರ ವಿದ್ಯಾರ್ಥಿಗಳಿಂದ ಮನ ರಂಜನೆ ಕಾರ್ಯಕ್ರಮ ನಡೆಯಿತು.

## ವೆಂಕಟೇಶ್ವರಸ್ವಾಮಿ ಆಲಯದ ಧ್ವಜಸ್ತಂಭ

ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದ ಆನಂದ ನಿಲಯ ವಿಮಾನದ ಸಂಪ್ರೋಕ್ಷಣೆಯ ಸಂದ ರ್ಭದಲ್ಲಿ ಗಮನಿಸಲಾದ ಧ್ವಜಸ್ತಂಭದ ಜೀರ್ಣೋ ದ್ಧಾರದ ಅಗತ್ಯಕ್ಕೆ ತಕ್ಕಂತೆ ಕರ್ನಾಟಕ ಕೇರಳ ಸರಕಾರಗಳನ್ನು ಧ್ವಜಸ್ತಂಭದ ಮರಕ್ಕಾಗಿ ಕೇಳಲಾಗಿದ್ದು, ಕರ್ನಾಟಕ ಸರಕಾರ ಸದರಿ ಮರ ವನ್ನು ಈಚೆಗೆ 5-5-82 ರಂದು ಶ್ರೀ ವೆಂಕಟೇಶ್ವರ ಸ್ವಾಮಿಯ ಕೈಂಕರ್ಯದಲ್ಲಿ ಒಪ್ಪಿಸಿತು.

ಬೆಂಗಳೂರಿನಲ್ಲಿ ನಡೆದ ಸರಳ ಸಮಾರಂಭದಲ್ಲಿ ಕರ್ನಾಟಕದ ಪರವಾಗಿ ಮುಖ್ಯ ಮಂತ್ರಿ ಶ್ರೀ ಗುಂಡೂರಾಯರು ಶ್ರೀ ಪ್ರಸಾದರಿಗೆ ಈ ಮರಗಳನ್ನು ಶಾಸ್ತ್ರೋಕ್ತವಾಗಿ ನೀಡಿದರು. ಬೆಂಗಳೂರಿನಿಂದ ತಿರುಮಲೆಗೆ ಪ್ರಯಾಣಮಾಡಿದ ಈ ಮರದ ಲಾರಿಗೆ ಅಲ್ಲಲ್ಲಿ ಪೂಜೆಯ ಏರ್ಪಾಡೂ ನಡೆದಿದ್ದು ತಿರುಮಲೆಯಲ್ಲಿ ಸದರಿ ಲಾರಿ ಚಾಲಕ ರನ್ನೂ, ಮರವನ್ನು ನೀಡಿದ ಕರ್ನಾಟಕದ ಶ್ರೀ ಎಚ್. ಎಸ್. ಆರ್. ಅಯ್ಯಂಗಾರ್ಯರನ್ನೂ ಸನ್ಮಾನಿಸಲಾಯಿತು.



ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿ ಧ್ವಜಸ್ತಂಭದ ಲಾರಿಯನ್ನು ಬೆಟ್ಟಕ್ಕೆ ಸೇರಿಸಿದ ಚಾಲಕ ವರ್ಗ, ಮರದಮೂಲ ದಾನಿಗಳನ್ನು ಸನ್ಮಾನಿಸಿದಾಗ ತೆಗೆದ ಚಿತ್ರ.

ಧ್ವಜಸ್ತಂಭವನ್ನು ಶಾಸ್ತ್ರೋಕ್ತವಾಗಿ ಮೇ 19 ರಂದು ಸ್ಥಾಪಿಸಲಾಗುವುದು.



ಕರ್ನಾಟಕದ ಪರವಾಗಿ ತಿ. ತಿ. ದೇಗಳಿಗೆ ಧ್ವಜಸ್ತಂಭದ ಮರವನ್ನು ದಾನಮಾಡುತ್ತಿರುವ ಮುಖ್ಯ ಮಂತ್ರಿ, ಹಾಗೂ ಧ್ವಜಸ್ತಂಭದ ಲಾರಿಯು ತಿರುಪತಿಯತ್ತ ಹೊರಡುವ ಮುನ್ನ ತೆಗೆದ ಎರಡು ಚಿತ್ರಗಳು



ವೈಕುಂಠಪುರದ ಉದ್ಘಾಟನಾಸಮಾರಂಭದ ಒಂದು ದೃಶ್ಯ

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಕಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | |
|---|---|
| ಸುಪ್ರಭಾತ | ಬೆಳಗ್ಗೆ 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, 5–30 ರಿಂದ 9–30 ವರೆಗೆ |
| ಅಭಿಷೇಕ | ,, 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, 11–30 ರಿಂದ 11–45 ವರೆಗೆ |
| ಸರ್ವದರ್ಶನ | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಅರ್ಜಿತ) | ಮಧ್ಯಾಹ್ನ 4–00 ರಿಂದ 4–30 ವರೆಗೆ |
| ಅರ್ಚನೆ (ಅರ್ಜಿತ) | ,, 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ 7–30 ರಿಂದ 8–00 ವರೆಗೆ |

ಅರ್ಜಿತಸೇವಾಕಾಲದಲ್ಲಿ ರೂ ॥ 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನುಮತಿಸಲ್ಪಡುವರು.

**ಪೇಷ್ಕಾರ್.**

## ತಿ. ತಿ. ದೇ. ಉದ್ಯೋಗಿಗಳ ವಸತಿಗಾಗಿ ವೈಕುಂಠಪುರ

ತಿರುಪತಿಯ ಹೊರವಲಯದ ಮುತ್ಯಾಲರೆಡ್ಡಿ ಪಲ್ಲಿಯಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳ ಉದ್ಯೋಗಿಗಳ ವಸತಿಗಾಗಿ ಹೊಸದಾದ 'ವೈಕುಂಠ ಪುರ' ವೆಂಬ ಉಪನಗರವೊಂದು ಸಿದ್ಧವಾಗಿದೆ.

60 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲಾದ ಉಪನಗರವನ್ನು ಏಪ್ರಿಲ್ 25 ರಂದು ಆಂಧ್ರ ಪ್ರದೇಶದ ಉಪ ಮುಖ್ಯ ಮಂತ್ರಿ ಶ್ರೀ ಜನಾರ್ಧನ ರಾವ್ ಅವರು ಉದ್ಘಾಟಿಸಿದರು.

ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಪಿ. ವಿ. ಚೌದರಿ ಅವರು ತಿ. ತಿ. ದೇವಸ್ಥಾನಗಳ ಉದ್ಯೋಗಿಗಳಿಗೆ ಹೆಚ್ಚು ಪ್ರಯೋಜನ ಕರವಾಗುವ ಈ 'ಸ್ವಂತ ಮನೆ' ಯೋಜನೆಯ ಕನಸನ್ನು ಕಾರ್ಯಗತಗೊಳಿಸಿದುದಕ್ಕಾಗಿ ಶ್ರೀ ಪ್ರಸಾದರನ್ನು ಅಭಿನಂದಿಸಿದರು.

ಗ್ರಾಮೀಣ ಅಭಿವೃದಿ ಹಾಗೂ ನೀರಾವರಿ ಮಂತ್ರಿ ಶ್ರೀ ಗೋವರ್ಧನ ರೆಡ್ಡಿ ಅವರು ಮಾತನಾಡುತ್ತ ಈ ವೈಕುಂಠ ಪುರದಲ್ಲಿ ನಂದನವನದಂತೆ ಹಸಿರು ತುಂಬಿರಲು ಗಿಡಗಳನ್ನು ಬೆಳೆಸಬೇಕೆಂದರು.

ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್ ಕೆ. ಪ್ರಸಾದರು ಮಾತನಾಡುತ್ತ ಬಹು ಬೇಗನೆ ಇಲ್ಲಿ ಸಹಕಾರೀ ಸಂಘದ ಅಂಗಡಿಗಳು. ಆಸ್ಪತ್ರೆ, ಶಾಲೆ, ಉದ್ಯಾನವನ ಮೊದಲಾದ ಸಾರ್ವಜನಿಕ ಅಗತ್ಯಗಳನ್ನು ಪೂರೈಸಲಾಗುವುದೆಂದೂ, ಮಂಗಳಂ ಬಳಿಯ 200 ಎಕರೆ ಪ್ರದೇಶದಲ್ಲಿ ಇನ್ನೊಂದು ಬಡಾವಣೆಯನ್ನೂ ಇದೇ ಉದ್ದೇಶದಿಂದ ಉಂಟಾಗಿಸಲು ಪ್ರಯತ್ನಗಳು ನಡೆದಿವೆಯೆಂದೂ ತಿಳಿಸಿದರು.

ಶ್ರೀ ಪಿ. ವಿ. ಚೌದರಿ ಅವರು 'ಡಿ' ಮಾದರಿ ಮನೆಗಳ ನಿರ್ಮಾಣಕ್ಕೆ ಶಿಲಾನ್ಯಾಸಮಾಡಿದರು.

———


Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25-00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2 | ಅಭಿಷೇಕ* | ರೂ 500 |
| 3 | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5 | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7 | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9 | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ. **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯು, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯು ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75-00 |
| ಟಿ.ಬಿ ಸಿ ಒಳಗಿ ಕಾಟೇಜುಗಳು | " | ರೂ 50-00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50-00 |
| ಆ) ಮಧ್ಯಮದ ಕೋಣೆಗಳು | ,, | ರೂ 40-00 |
| ಇ) ಕಿರಿಯ ಕೋಣೆಗಳು | ,, | ರೂ 35-00 |
| ಎಚ್. ಆರ್. ಜಿ. ಕಾಟೇಜು | ,, | ರೂ 150-00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80-00 |
| ಗೋಗಿನೇನಿ ಕಾಟೇಜು | ,, | ರೂ 80-00 |
| ಸಿ ಸಿ. ಕಾಟೇಜು | ,, | ರೂ 100-00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50-00 |
| ಎ ಟಿ ಸಿ. ನಂ. 39 | ,, | ರೂ 80-00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20-00 |
| ಶೇಷಾದ್ರಿನಗರ ,, | ,, | ರೂ 20-00 |
| ಅಂಜನಾದ್ರಿನಗರ ,, | ,, | ರೂ 20-00 |
| ಗರುಡಾದ್ರಿನಗರ ,, | ,, | ರೂ 20-00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20-00 |
| ನಾಲ್ಕು " | ರೂ 25-00 |
| ಒಂದು " | ರೂ 15-00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50-00 |
| ,, ಒಂದು ಹಾಸಿಗೆಯ ಕೋಣೆ | ರೂ 30-00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20-00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.